**ಆದೇಶ ನಂ. ಡಿಆರ್‌ಎಸ್ / ಸಮಾಪನೆ ಡಿಎಲ್‌ಎಸ್ / 134 / 2006-07 / 1065, ದಿನಾಂಕ: 29ನೇ ಜುಲೈ 2006.**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ-ನಿಬಂಧಕರು. ಕೆ. ಈಶ್ವರಸ್ವಾಮಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ. ಸಿ.ಎಂ.ಡಬ್ಲ್ಯೂ / 69 / ಸಿಎಲ್‌ಎಂ / 2001 ದಿನಾಂಕ: 21.11.2001 ರ ಪ್ರಕಾರ ದತ್ತವಾದ ಅಧಿಕಾರದನ್ವಯ ಪ್ರಸ್ತಾವನೆಯಲ್ಲಿ ಹೇಳಲಾದ ಕಾರಣಗಳಿಗಾಗಿ, ಭದ್ರಾ ಕೋ-ಆಪರೇಟೀವ್ ಸ್ಟೋರ್ಸ್ ಲಿ., ಭದ್ರಾವತಿ, ಭದ್ರಾವತಿ ತಾ: ಈ ಸಂಘವನ್ನು ಸಮಾಪನೆಗೊಳಿಸಿ ಆದೇಶಿಸಿರುತ್ತೇನೆ.

ಸಹಕಾರ ಕಾಯಿದೆ ಕಲಂ 73ರಲ್ಲಿ ದತ್ತವಾದ ಅಧಿಕಾರದನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಭದ್ರಾವತಿ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕಗೊಳಿಸಿದ್ದು, ಸದರಿಯವರು ಈ ಆದೇಶದ 30 ದಿನಗಳೊಳಗಾಗಿ ಸಮಾಪನಾ ಕಾರ್ಯವನ್ನು ನಿರ್ವಹಿಸಲು ಸೂಚಿಸಿದೆ.

ಈ ಆದೇಶವನ್ನು ದಿನಾಂಕ: 29.07.2006 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಪಿ.ಆರ್. 1237 ಶಿವಮೊಗ್ಗ.

**ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ - ನಿಬಂಧಕರು, ಶಿವಮೊಗ್ಗರವರ ನಡವಳಿಕೆ**

**ವಿಷಯ:** ನಿಷ್ಕ್ರಿಯೆಗೊಂಡ ಮೀನುಗಾರರ ಸಹಕಾರ ಸಂಘ ನಿ., ಸೊರಬ, ಸೊರಬ ತಾ: ಇದರ ಸಮಾಪನೆ ಬಗ್ಗೆ.

**ಉಲ್ಲೇಖ:** 1) ಸ.ಸಂ.ಗಳ ಸಹಾಯಕ ನಿಬಂಧಕರು, ಸಾಗರ ರವರ ಪತ್ರ ನಂ. ಎಆರ್-25 / ಸಮಾಪನೆ / ಸಿಆರ್. 38 / 2006-07/ ದಿ: 26.06.2006 ಮತ್ತು 15.7.2006.

**ಪ್ರಸ್ತಾವನೆ:**

ಮೀನುಗಾರರ ಸಹಕಾರ ಸಂಘ ನಿ., ಸೊರಬ, ಸೊರಬ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರ ಉಪ-ವಿಭಾಗ ಸಾಗರ ರವರ ಕಾರ್ಯಾಲಯದ ಸಂಖ್ಯೆ. ಸನಿ-25 / ನೊಂದಣಿ / 1119 / 1956 ದಿನಾಂಕ: 18.01.1956 ರಲ್ಲಿ ನೊಂದಣಿಯಾಗಿದ್ದು, ಕಾರ್ಯ ವ್ಯಾಪ್ತಿ ತಾಲ್ಲೂಕಿಗಿಂತ ಕಡಿಮೆ ವ್ಯಾಪ್ತಿಯಿರುತ್ತದೆಂದು ಈ ಸಂಘವು ಬೈಲಾದಲ್ಲಿಯ ಉದ್ದೇಶಗಳಂತೆ ಕಾರ್ಯನಿರ್ವಹಿಸದೆ, ಸುಮಾರು ವರ್ಷಗಳಿಂದ ಸ್ಥಗಿತಗೊಳಿಸಿರುವುದಾಗಿ ಉಲ್ಲೇಖ (1)ರ ಪತ್ರದಲ್ಲಿ ವರದಿ ಮಾಡಿ ಸಮಾಪನೆಗೆ ಶಿಫಾರಸ್ಸು ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರು ಸಲ್ಲಿಸಿರುವ ವರದಿಯನ್ನು ಪರಿಶೀಲಿಸಿ ಮತ್ತು ಆಡಳಿತಾಧಿಕಾರಿಯವರು ದಿ: 4.4.2006 ರಂದು ನಿರ್ಣಯಿಸಿದ ತೀರ್ಮಾನದ ಮೇರೆಗೆ ಆಡಳಿತ ಮಂಡಳಿಯವರಿಗಾಗಲೀ ಪದಾಧಿಕಾರಿಗಳಾಗಲೀ ಈ ಸಂಘದ ವ್ಯವಹಾರದಲ್ಲಿ ಆಸಕ್ತಿ ಇಲ್ಲವೆಂದು ವ್ಯಕ್ತವಾಗುತ್ತದೆ. ಸಹಾಯಕ ನಿಬಂಧಕರ ಶಿಫಾರಸ್ಸು ಆಧಾರದಿಂದ ಈ ಸಂಘವು ಸ್ಥಗಿತಗೊಂಡಿದೆ ಎಂದು ಅಭಿಪ್ರಾಯಪಟ್ಟು ಈ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ನಂ. ಡಿಆರ್‌ಎಸ್ / ಸಮಾಪನೆ ಡಿಎಲ್‌ಎಸ್ / 117 / 2006-07 / 1074, ದಿನಾಂಕ: 20ನೇ ಜುಲೈ 2006.**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ-ನಿಬಂಧಕರು. ಕೆ. ಈಶ್ವರಸ್ವಾಮಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ. ಸಿ.ಎಂ.ಡಬ್ಲ್ಯೂ / 69 / ಸಿಎಲ್‌ಎಂ / 2001 ದಿನಾಂಕ: 21.11.2001 ರ ಪ್ರಕಾರ ದತ್ತವಾದ ಅಧಿಕಾರದನ್ವಯ ಪ್ರಸ್ತಾವನೆಯಲ್ಲಿ ಹೇಳಲಾದ ಕಾರಣಗಳಿಗಾಗಿ, ಮೀನುಗಾರರ ಸಹಕಾರ ಸಂಘ ನಿ., ಸೊರಬ, ಸೊರಬ ತಾ: ಈ ಸಂಘವನ್ನು ಸಮಾಪನೆಗೊಳಿಸಿ ಆದೇಶಿಸಿರುತ್ತೇನೆ.

ಸಹಕಾರ ಕಾಯಿದೆ ಕಲಂ 73ರಲ್ಲಿ ದತ್ತವಾದ ಅಧಿಕಾರದನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಸೊರಬ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕಗೊಳಿಸಿದ್ದು, ಸದರಿಯವರು ಈ ಆದೇಶದ 30 ದಿನಗಳೊಳಗಾಗಿ ಸಮಾಪನಾ ಕಾರ್ಯವನ್ನು ನಿರ್ವಹಿಸಲು ಸೂಚಿಸಿದೆ.

ಈ ಆದೇಶವನ್ನು ದಿನಾಂಕ: 20.07.2006 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಪಿ.ಆರ್. 1239 ಶಿವಮೊಗ್ಗ.

**ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ - ನಿಬಂಧಕರು, ಶಿವಮೊಗ್ಗರವರ ನಡವಳಿಕೆ**

**ವಿಷಯ:** ನಿಷ್ಕ್ರಿಯೆಗೊಂಡ ಹಾಲು ಉತ್ಪಾದಕರ ಸ.ಸಂ.ನಿ., ಸೊನ್ಲೆ, ಹೊಸನಗರ ತಾ: ಇದರ ಸಮಾಪನೆ ಬಗ್ಗೆ.

**ಉಲ್ಲೇಖ:** 1) ಸ.ಸಂ.ಗಳ ಸಹಾಯಕ ನಿಬಂಧಕರು, ಸಾಗರ ರವರ ಪತ್ರ ನಂ. ಎಆರ್-25 / ಸಮಾಪನೆ / ಸಿಆರ್. 30 / 2006-07/ ದಿ: 03.06.2006 ಮತ್ತು 11.7.2006.

2) ಈ ಕಛೇರಿಯ ನೋಟೀಸ್ ಸಮಸಂಖ್ಯೆ ದಿ: 15.6.2006.

**ಪ್ರಸ್ತಾವನೆ:**

ಹಾಲು ಉತ್ಪಾದಕರ ಸ.ಸಂ.ನಿ., ಸೊನ್ಲೆ, ಹೊಸನಗರ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರ ಉಪ-ವಿಭಾಗ ಸಾಗರ ರವರ ಕಾರ್ಯಾಲಯದ ಸಂಖ್ಯೆ. ಸನಿ-25 / ನೊಂದಣಿ / 16294 / 89-90 ದಿನಾಂಕ: 24.03.1990 ರಲ್ಲಿ ನೊಂದಣಿಯಾಗಿದ್ದು, ಕಾರ್ಯ ವ್ಯಾಪ್ತಿ ತಾಲ್ಲೂಕಿಗಿಂತ ಕಡಿಮೆ ವ್ಯಾಪ್ತಿಯಿರುತ್ತದೆಂದು ಈ ಸಂಘವು ಬೈಲಾದಲ್ಲಿಯ ಉದ್ದೇಶಗಳಂತೆ ಕಾರ್ಯನಿರ್ವಹಿಸದೆ, ಹಾಲು ಸಂಗ್ರಹಣೆ ಮತ್ತು ಮಾರಾಟ ಕಾರ್ಯವನ್ನು ಸುಮಾರು ಮೂರು ನಾಲ್ಕು ವರ್ಷಗಳಿಂದ ಸ್ಥಗಿತಗೊಳಿಸಿರುವುದಾಗಿ ಉಲ್ಲೇಖ (1)ರ ಪತ್ರದಲ್ಲಿ ವರದಿ ಮಾಡಿ ಸಮಾಪನೆಗೆ ಶಿಫಾರಸ್ಸು ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರು ಸಲ್ಲಿಸಿರುವ ವರದಿಯನ್ನು ಪರಿಶೀಲಿಸಿ ಈ ಸಂಘದ ಆಡಳಿತ ಮಂಡಳಿ ನಿರ್ದೇಶಕರುಗಳಿಗೆ ವಿವರಣೆ ಕೇಳಿ ಉಲ್ಲೇಖ (2)ರ ಪತ್ರದಲ್ಲಿ ನೋಟೀಸ್ ಕೊಟ್ಟಿದ್ದು, ನೋಟೀಸನ್ನು ಜಾರಿಗೊಳಿಸಿದೆ. ಈ ನೋಟೀಸಿನಲ್ಲಿ ತಿಳಿಸಿದ ಗಡವು ದಿನಾಂಕದೊಳಗೆ ಅಥವಾ ಈ ದಿನಾಂಕದೊಳಗೆ ವಿವರಣೆ ಸಲ್ಲಿಸಿರುವುದಿಲ್ಲ. ಆದ್ದರಿಂದ ಆಡಳಿತ ಮಂಡಳಿಯವರಿಗಾಗಲೀ ಪದಾಧಿಕಾರಿಗಳಾಗಲೀ ಈ ಸಂಘದ ವ್ಯವಹಾರದಲ್ಲಿ ಆಸಕ್ತಿ ಇಲ್ಲವೆಂದು ವ್ಯಕ್ತವಾಗುತ್ತದೆ. ಸಹಾಯಕ ನಿಬಂಧಕರ ಶಿಫಾರಸ್ಸು ಆಧಾರದಿಂದ ಈ ಸಂಘವು ಸ್ಥಗಿತಗೊಂಡಿದೆ ಎಂದು ಅಭಿಪ್ರಾಯಪಟ್ಟು ಈ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ನಂ. ಡಿಆರ್‌ಎಸ್ / ಸಮಾಪನೆ ಡಿಎಲ್‌ಎಸ್ / 58 / 2006-07 / 1073, ದಿನಾಂಕ: 18ನೇ ಜುಲೈ 2006.**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ-ನಿಬಂಧಕರು. ಕೆ. ಈಶ್ವರಸ್ವಾಮಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ. ಸಿ.ಎಂ.ಡಬ್ಲ್ಯೂ / 69 / ಸಿಎಲ್‌ಎಂ / 2001 ದಿನಾಂಕ: 21.11.2001 ರ ಪ್ರಕಾರ ದತ್ತವಾದ ಅಧಿಕಾರದನ್ವಯ ಪ್ರಸ್ತಾವನೆಯಲ್ಲಿ ಹೇಳಲಾದ ಕಾರಣಗಳಿಗಾಗಿ, ಹಾಲು ಉತ್ಪಾದಕರ ಸ.ಸಂ.ನಿ., ಸೊನ್ಲೆ, ಹೊಸನಗರ ತಾ: ಈ ಸಂಘವನ್ನು ಸಮಾಪನೆಗೊಳಿಸಿ ಆದೇಶಿಸಿರುತ್ತೇನೆ.

ಸಹಕಾರ ಕಾಯಿದೆ ಕಲಂ 73ರಲ್ಲಿ ದತ್ತವಾದ ಅಧಿಕಾರದನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಹೊಸನಗರ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕಗೊಳಿಸಿದ್ದು, ಸದರಿಯವರು ಈ ಆದೇಶದ 30 ದಿನಗಳೊಳಗಾಗಿ ಸಮಾಪನಾ ಕಾರ್ಯವನ್ನು ನಿರ್ವಹಿಸಲು ಸೂಚಿಸಿದೆ.

ಈ ಆದೇಶವನ್ನು ದಿನಾಂಕ: 18.07.2006 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಪಿ.ಆರ್. 1238 ಶಿವಮೊಗ್ಗ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಪ್ರಾದೇಶಿಕ ಅರಣ್ಯ ವಿಭಾಗ, ಬೀದರ್ ಇವರ ನ್ಯಾಯಾಲಯ, ಬೀದರ್**

**ಅಧಿಸೂಚನೆ**

**ಸಂಖ್ಯೆ: ಸರ್ವೆ : ಉಅಸಂ : ಬೀದರ್ : ಮುಟ್ಟುಗೋಲು-71ಎ : ಸಿಆರ್-10 / 2006-07, ದಿನಾಂಕ 9ನೇ ಆಗಸ್ಟ್ 2006.**

ಬೀದರ್ ಪ್ರಾದೇಶಿಕ ಅರಣ್ಯ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಅರಣ್ಯ ಉತ್ಪನ್ನಗಳ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಬೀದರ್ ಜಿಲ್ಲೆಯ ಪೊಲೀಸ್ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ 1963 ರ ಸೆಕ್ಷನ್ 71 (ಎ) ಪ್ರಕಾರ ಕ್ರಮ ಜರುಗಿಸುವಂತೆ ಈ ಕಾರ್ಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ವಿವರ ಈ ಕೆಳಗಿನಂತಿದೆ.

| ಕ್ರ. ಸಂ. | ವಾಹನಗಳ ವಿವರ | ಪೊಲೀಸ್ / ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಚೇಸಿ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| 1 | Maruthi Suzuki Car No. MH-31, AB-1202 | 31/2006 | F-8-DN-1018389 | SB-308-IN146159 |

ಈ ಮೇಲೆ ತೋರಿಸಿರುವ ವಾಹನದ ಬಗ್ಗೆ ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನದ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳ ಸಹಿ ಮಾಡಿರುವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರು ಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೆ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳ ಅಧಿಕೃತ ಸಮಾಜಾಯಿಸಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳ ಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರು ಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲಿನ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳ ಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 71 (ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ದಿಲೀಪಕುಮಾರ್ ದಾಸ್**
ಪಿ.ಆರ್. 1243 ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಪ್ರಾದೇಶಿಕ ಅರಣ್ಯ ವಿಭಾಗ, ಬೀದರ್.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ನಂ: ಎಲ್.ಎನ್.ಡಿ (ಎನ್) ಸಿ.ಆರ್ 27 / 01-02, ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2006**

**ವಿಷಯ:** ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಶಿವನಹಳ್ಳಿ ಗ್ರಾಮದ ಸ.ನಂ. 3 ರಲ್ಲಿ 1.08 ಎಕರೆ:ಗುಂಟೆ ಸರ್ಕಾರಿ ಜಮೀನನ್ನು ಸರ್ಕಾರಿ ಶಾಲೆ ಮತ್ತು ಆಟದ ಮೈದಾನಕ್ಕಾಗಿ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಪತ್ರದ ಸಂಖ್ಯೆ ಆರ್.ಡಿ. 280 ಎಲ್.ಜಿ.ಬಿ. 2006, ದಿನಾಂಕ: 6.7.2006.

2) ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರ ಪತ್ರದ ಸಂಖ್ಯೆ: ಎಲ್.ಎನ್.ಡಿ:ಸಿ.ಆರ್: 239/05-06, ದಿನಾಂಕ: 31.3.2006, ಎಲ್.ಎನ್.ಡಿ:ಸಿ.ಆರ್: 115/01-02, ದಿನಾಂಕ: 31.5.2001.

ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಶಿವನಹಳ್ಳಿ ಸರ್ಕಾರಿ ಪದವಿ ಪೂರ್ವ ಕಾಲೇಜಿಗಾಗಿ ಶಿವನಹಳ್ಳಿ ಗ್ರಾಮ ಸ.ನಂ. 3 ರಲ್ಲಿ ಲಭ್ಯವಿರುವ ಸರ್ಕಾರಿ ಜಮೀನನ್ನು ಮಂಜೂರು ಮಾಡಬೇಕೆಂದು ಶಾಲಾ ಸುಧಾರಣಾ ಸಮಿತಿ (ರಿ) ಮತ್ತು ಅಲ್ಲಿನ ಶಾಸಕರು ಮನವಿಯನ್ನು ಸಲ್ಲಿಸಿರುತ್ತಾರೆ.

ಈ ಬಗ್ಗೆ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರು ಉಲ್ಲೇಖ (2) ರ ಪತ್ರಗಳಲ್ಲಿ ವರದಿ ನೀಡಿ ಶಿವನಹಳ್ಳಿ ಗ್ರಾಮ ಸರ್ವೆ ನಂಬರ್ 3 ಸರ್ಕಾರಿ ಬೀಳು ಜಮೀನು ಆಗಿದ್ದು ಇದರ ಒಟ್ಟು ವಿಸ್ತೀರ್ಣ 2.02 ಎಕರೆ:ಗುಂಟೆ ಇದ್ದು ಖರಾಬು 0.22 ಗುಂಟೆ ಉಳಿಕೆ 1.20 ಎಕರೆ:ಗುಂಟೆ ಇರುತ್ತೆ. ಇದರಲ್ಲಿ 0.04 ಗುಂಟೆ ಪ್ರದೇಶದಲ್ಲಿ ಶ್ರೀ ವೆಂಕಟೇಶಪ್ಪ ಬಿನ್ ರಂಗಯ್ಯ ರವರು ಒತ್ತುವರಿ ಮಾಡಿಕೊಂಡಿದ್ದು ಈ ಬಗ್ಗೆ ಕರ್ನಾಟಕ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ತಡೆಯಾಜ್ಞೆ ಇರುತ್ತದೆ. ಹಾಗೂ ಈ ಜಮೀನಿನ ಸುತ್ತ ಮೂರು ದಿಕ್ಕುಗಳಲ್ಲಿ ರಸ್ತೆಯು ನಿರ್ಮಾಣವಾಗಿದ್ದು,

ಇದೆಲ್ಲಾ ಹೋಗಿ 1.08 ಎಕರೆ:ಗುಂಟೆ ಜಮೀನು ಉಳಿದಿರುತ್ತದೆ. ಇದರಲ್ಲಿ ಗಣಪತಿ, ಶನಿದೇವರ ದೇವಸ್ಥಾನ, ಎ.ಸಿ. ಶೀಟಿನ 20X15 ವಿಸ್ತೀರ್ಣ ಮನೆಗಳು ಮತ್ತು ಅಶ್ವಥಕಟ್ಟೆ ಇದ್ದು ಈ ಜಮೀನಿನ ಮೇಲೆ ಎರಡು ಅಧಿಕಶಕ್ತಿ ವಿದ್ಯುತ್ ತಂತಿ ಹಾದು ಹೋಗಿರುತ್ತದೆ ಎಂದು ವರದಿ ನೀಡಿ 0.04 ಗುಂಟೆ ಜಮೀನಿನ ಬಗ್ಗೆ ನ್ಯಾಯಾಲಯದಲ್ಲಿ ಜಂಜಕ್ಷನ್ ಆದೇಶವಿರುವುದರಿಂದ ಸದರಿ ಪ್ರದೇಶವನ್ನು ಹೊರತುಪಡಿಸಿ ಬಾಕಿ ಉಳಿದ 1.08 ಎಕರೆ:ಗುಂಟೆ ಪ್ರದೇಶವನ್ನು ಸರ್ಕಾರಿ ಕಾಲೇಜು, ಆಟದ ಮೈದಾನ ಮತ್ತು ಗ್ರಂಥಾಲಯ ಉದ್ದೇಶಕ್ಕೆ ಶಿಕ್ಷಣ ಇಲಾಖೆಯವರಿಗೆ ನೀಡಬಹುದೆಂದು ವರದಿ ನೀಡಿರುತ್ತಾರೆ.

ತಹಶೀಲ್ದಾರ, ಬೆಂಗಳೂರು ಉತ್ತರ ತಾಲ್ಲೂಕು ರವರ ವರದಿಯಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದ್ದು ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ ಪ್ರಶ್ನಿತ ಜಮೀನನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71ರಡಿ ಸದರಿ ಜಮೀನನ್ನು ಶಿಕ್ಷಣ ಇಲಾಖೆಗೆ ಕಾಯ್ದಿರಿಸಬಹುದೆಂದು ಪೂರ್ವಾನುಮೋದನೆ ನೀಡಿರುತ್ತಾರೆ.

ಉಲ್ಲೆಖ (1) ರ ಸರ್ಕಾರದ ಪೂರ್ವಾನುಮೋದನೆ ಮೇರೆಗೆ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಶಿವನಹಳ್ಳಿ ಗ್ರಾಮದ ಸ.ನಂ. 3ರ ನಕ್ಷೆಯಲ್ಲಿ ಗುರ್ತಿಸಿರುವ 1.08 ಎಕರೆ:ಗುಂಟೆ ಜಮೀನನ್ನು ಸರ್ಕಾರಿ ಕಾಲೇಜು, ಆಟದ ಮೈದಾನ ಮತ್ತು ಗ್ರಂಥಾಲಯ ಉದ್ದೇಶಕ್ಕೆ ಉಲ್ಲೇಖ (1)ರ ಸರ್ಕಾರದ ಪೂರ್ವಾನುಮೋದನೆಯ ಮೇರೆಗೆ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71 ರಡಿ ಜಮೀನನ್ನು ಶಿಕ್ಷಣ ಇಲಾಖೆಗೆ ಕಾಯ್ದಿರಿಸಿದೆ ಮತ್ತು ಸದರಿ ಜಮೀನಿನ ಉಸ್ತುವಾರಿಯನ್ನು ಉಪನಿರ್ದೇಶಕರು, ಸಾರ್ವಶಿಕ್ಷಣ ಇಲಾಖೆ, ಬೆಂಗಳೂರು ಉತ್ತರ ವಲಯ ರವರಿಗೆ ವಹಿಸಲಾಗಿದೆ.

ವಿಶೇಷ ಜಿಲ್ಲಾಧಿಕಾರಿಗಳು,
ಪಿ.ಆರ್. 1244 ಬೆಂಗಳೂರು ಜಿಲ್ಲೆ, ಬೆಂಗಳೂರು.

## ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

**ವಿಷಯ:** ಸಮಾಪನೆಗೊಂಡ ಇಸುವನಹಳ್ಳಿ ಸೇವಾ ಸಹಕಾರ ಸಂಘ ನಿ., ನೆಲಮಂಗಲ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಅಭಿವೃದ್ಧಿ ಅಧಿಕಾರಿ, ನೆಲಮಂಗಲ ರವರ ಪತ್ರ ದಿ: ಸಅನೆ / ನೋಂದಣಿ ರದ್ಧತಿ / 2003-04 ದಿ: 29.7.06.

2) ಈ ಕಛೇರಿಯ ಸಮಾಪನಾ ಆದೇಶ ಸಂ: ಡಿಆರ್‌ಬಿ / ಆರ್ / ಸಮಾಪನೆ / 40 / 84-85 ದಿ: 24.4.84.

3) ಸ.ಸಂ. ನಿಬಂಧಕರ ಆದೇಶ ಸಂ: ಆರ್‌ಸಿಎಸ್ / ಎಲ್‌ಕ್ಯೂಡಿ / 50 / 2005-06 ದಿ: 25.7.2005.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು ದೊಡ್ಡಬಳ್ಳಾಪುರ ರವರ ಕಛೇರಿಯಲ್ಲಿ ಇಸುವನಹಳ್ಳಿ ಸೇವಾ ಸಹಕಾರ ಸಂಘ ನಿ. ನೆಲಮಂಗಲ ತಾಲ್ಲೂಕು ಈ ಸಂಘವು ಸಂ: 1140 ದಿನಾಂಕ: 11.12.1995 ರಂತೆ ನೋಂದಣಿಯಾಗಿರುತ್ತದೆ. ಸದರಿ ಸಂಘವು ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿರುವುದರಿಂದ ಉಲ್ಲೇಖ (2) ರ ಪತ್ರದಲ್ಲಿ ಸದರಿ ಸಂಘವನ್ನು ಸಮಾಪನೆಗೊಳಿಸಲಾಗಿದ್ದು, ಅದರಂತೆ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಷೇರು ಮತ್ತು ಸಾಲ ಮನ್ನಾ ಮಾಡುವ ಪ್ರಸ್ತಾವನೆಯನ್ನು ಸಲ್ಲಿಸಿದ್ದು ಉಲ್ಲೇಖ (3) ರಲ್ಲಿ ಸಂಘದ ಷೇರು ರೂ. 10,000 ಗಳನ್ನು ಮನ್ನಾ ಮಾಡಿ ಆದೇಶ ನೀಡಿರುತ್ತಾರೆ. ಆದ್ದರಿಂದ ಈ ಸಂಘವನ್ನು ಮುಂದುವರೆಸಿದರೆ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನವಿಲ್ಲ. ಆದ್ದರಿಂದ ಸದರಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಉಲ್ಲೇಖ (1) ರ ಪತ್ರದಲ್ಲಿ ತಿಳಿಸಿರುವ ಮೇರೆಗೆ ಇಸುವನಹಳ್ಳಿ ಸೇವಾ ಸಹಕಾರ ಸಂಘ ನಿ. ನೆಲಮಂಗಲ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ ರದ್ದುಪಡಿಸಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

### ಆದೇಶ

### ನಂ. ಡಿಆರ್‌ಬಿ / ಆರ್ / ನೋಂದಣಿ ರದ್ಧತಿ / 56 / 2006-2007, ದಿನಾಂಕ: 31ನೇ ಜುಲೈ 2006

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ : 69 : ಸಿಎಲ್‌ಎಂ : 2001 ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಬಿ.ಎಸ್. ಹರೀಶ್, ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಇಸುವನಹಳ್ಳಿ ಸೇವಾ ಸಹಕಾರ ಸಂಘ ನಿ., ನೆಲಮಂಗಲ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ: 1140 ದಿನಾಂಕ: 11.12.1995ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 31.7.2006 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ಪಿ.ಆರ್. 1246 ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

## ಕೃಷಿ ಮಾರಾಟ ಇಲಾಖೆ

## ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 11ನೇ ರಾಜಭವನ ರಸ್ತೆ, ಪಿ.ಬಿ. ನಂ. 5309, ಬೆಂಗಳೂರು

### ಅಧಿಸೂಚನೆ

### ಸಂಖ್ಯೆ: ಕೃಮಾಇ : 30 : ನಿಯವಿ : 2006, ಬೆಂಗಳೂರು, ದಿನಾಂಕ: 4ನೇ ಆಗಸ್ಟ್ 2006

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 6ರ ಉಪಪ್ರಕರಣ (2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಜಿ.ಎಸ್. ನಾರಾಯಣಸ್ವಾಮಿ ಆದ ನಾನು, ಪುತ್ತೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಕಾಲಕಾಲಕ್ಕೆ ಹೊರಡಿಸಲಾದ ಸರ್ಕಾರಿ ಅಧಿಸೂಚನೆಗಳ ಮೂಲಕ ಮಾರಾಟ ನಿಯಂತ್ರಣಕ್ಕೆ ಒಳಪಡಿಸಿರುವ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಪುತ್ತೂರು ಸಮಿತಿಯ ಕಾರ್ಯಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ನೆಲ್ಯಾಡಿ, ಕಾಣಿಯೂರು ಮತ್ತು ಈಶ್ವರ ಮಂಗಲ ಪ್ರದೇಶವನ್ನು "ಉಪಮಾರುಕಟ್ಟೆ" ಎಂದು ಮತ್ತು ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಸ್ಥಳವನ್ನು "ಉಪ ಮಾರುಕಟ್ಟೆ ಪ್ರಾಂಗಣ" ಎಂದು ಈ ಮೂಲಕ ಘೋಷಿಸಿದ್ದೇನೆ.

**ನಿಯಂತ್ರಣಕ್ಕೊಳಪಡಿಸಿರುವ ಕೃಷಿ ಉತ್ಪನ್ನಗಳು**

1. ಜಾನುವಾರುಗಳು, 2. ಮೇಕೆಗಳು, 3. ಕುರಿಗಳು, 4. ಹತ್ತಿ (ಬೀಜ ತೆಗೆದ ಮತ್ತು ತೆಗೆಯದ) 5. ಎಲ್ಲಾ ಹೂ.ಗಳು, 6. ಸಜ್ಜೆ, 7. ಜವೆ ಗೋಧಿ, 8. ಜೋಳ, 9. ಕಂಬು, 10. ಮೆಕ್ಕೆ ಜೋಳ, 11. ನವಣೆ, 12. ಭತ್ತ, 13. ರಾಗಿ, 14. ಅಕ್ಕಿ, 15. ಸಾಮೆ (ಸಾವೆ), 16. ಗೋಧಿ, 17. ಅಂಟುವಾಳ, 18. ಬೊಂಬು, 19. ಬೆತ್ತ, 20. ಹಿಪ್ಪೆಬೀಜ, 21. ಹೊಂಗೇಬೀಜ, 22. ಬೇವಿನಬೀಜ, 23. ಸೀಗೇಕಾಯಿ, 24. ಹುಣಸೇಹಣ್ಣು, 25. ಹುಣಸೇಬೀಜ, 26. ಸೇಬು, 27. ಬಾಳೆಹಣ್ಣು, 28. ಬೋರೆಹಣ್ಣು, 29. ಹುಳಿಹಣ್ಣುಗಳು, 30. ಚಕ್ಕೋತನ ಹಣ್ಣು, 31. ಪೇರಲೆಹಣ್ಣು (ಸೀಬೆಹಣ್ಣು), 32. ದ್ರಾಕ್ಷಿ, 33. ಹಲಸಿನಹಣ್ಣು, 34. ಜಂಬುನೇರಳೆ ಹಣ್ಣು, 35. ನಿಂಬೆಹಣ್ಣು, 36. ಕರಬೂಜ, 37. ಮಾವಿನಹಣ್ಣು, 38. ಮೂಸಂಬಿ, 39. ಮರಸೇಬು, 40. ಪೈನಾಪಲ್ (ಅನಾನಸ್), 41. ಪಪ್ಪಾಯಿಹಣ್ಣು (ಪರಂಗಿಹಣ್ಣು), 42. ದಾಳಿಂಬೆಹಣ್ಣು, 43. ಸಪೋಟಾ, 44. ಸಿದ್ದೋಟ, 45. ಕಿತ್ತಳೆ, 46. ಕಲ್ಲಂಗಡಿ, 47. ನೆಲಗಡಲೆ (ಶೇಂಗಾ) (ಕಾಯಿ ಮತ್ತು ಬೀಜ), 48. ಹರಳುಬೀಜ, 49. ಹತ್ತಿಬೀಜ, 50. ಅಗಸೆಬೀಜ, 51. ಸಾಸುವೆ, 52. ಹುಚ್ಚೆಳ್ಳು, 53. ಕುಸುಬೆ, 54. ಎಳ್ಳು, 55. ಸೂರ್ಯಕಾಂತಿಬೀಜ, 56. ಸೋಯಾಬಿನ್, 57. ಅಡಿಕೆ, 58. ಗೋಡಂಬಿಬೀಜ, 59. ಒಣಮೆಣಸಿನಕಾಯಿ, 60. ತೆಂಗಿನಕಾಯಿ, 61. ಕೊಬ್ಬರಿ, 62. ಕೊತ್ತಂಬರಿಬೀಜ (ಧನಿಯಾ), 63. ಬೆಳ್ಳುಳ್ಳಿ, 64. ಶುಂಠಿ, 65. ಮೆಂತ್ಯ, 66. ಕಾಳುಮೆಣಸು, 67. ಅರಿಶಿನ, 68. ಅಲಸಂದೆ (ಇಡೀ ಮತ್ತು ಒಡೆದ), 69. ಅವರೆ (ಇಡೀ ಮತ್ತು ಒಡೆದ), 70. ಕಡಲೆ (ಇಡೀ ಮತ್ತು ಒಡೆದ), 71. ಉದ್ದು (ಇಡೀ ಮತ್ತು ಒಡೆದ), 72. ಬುಲ್ಲರ್ (ಇಡೀ ಮತ್ತು ಒಡೆದ), 73. ಹೆಸರು (ಇಡೀ ಮತ್ತು ಒಡೆದ), 74. ಹುರುಳಿ, 75. ಲಾಕ್ (ಇಡೀ ಮತ್ತು ಒಡೆದ), 76. ಮಡಿಕೆ (ಮಟಕಿ) (ಇಡೀ ಮತ್ತು ಒಡೆದ), 77. ಚೆನ್ನಂಗಿ (ಮಸೂರಿ) (ಇಡೀ ಮತ್ತು ಒಡೆದ), 78. ಬಟಾಣಿ, 79. ತೊಗರಿ (ಇಡೀ ಮತ್ತು ಒಡೆದ), 80. ಮೋತ್ (ಇಡೀ ಮತ್ತು ಒಡೆದ), 81. ಎಲ್ಲಾ ತರಕಾರಿಗಳು (ಗರ್ಕಿನ್‌ಹೊರತುಪಡಿಸಿ ಸೊಪ್ಪುಗಳು ಸೇರಿಸಿ), 82. ಕಾಯಿಗಳು, 83. ಹಸಿರುಮೆಣಸಿನಕಾಯಿ, 84. ಈರುಳ್ಳಿ, 85. ಆಲೂಗಡ್ಡೆ, 86. ಸುವರ್ಣಗಡ್ಡೆ, 87. ಸಿಹಿಗೆಣಸು (ಗೆಣಸು), 88. ಟೊಮ್ಯೋಟೋ, 89. ಬೀಟೆ (ರೋಸ್‌ವುಡ್), 90. ಬಿಲ್ವಾಲ, 91. ಉರುವಲು ಕಟ್ಟಿಗೆ, 92. ಗಂಜಾನ್, 93. ಹಡಗ, 94. ಹಳದಿ, 95. ಹನಿಮತ್ತಲ್, 96. ಹೊನ್ನೆ, 97. ಐಯಾನಿ, 98. ಹಲಸಿನಮರ, 99. ಜಂಬ, 100. ಕಲ್ಸ್, 101. ಕಿಂಡಲ್, 102. ಮಾವಿನಮರ, 103. ಮತ್ತಿ, 104. ನಂದಿ, 105. ರಾಂಪತ್ರೆ, 106. ತೇಗ (ಸಾಗುವಾನಿ), 107. ಬಿಳಿ ದೇವದಾರು (ಕೇದರ), 108. ಸಿಲ್ವರ್ ಓಕ್, 109. ನೀಲಗಿರಿ, 110. ವೀಳ್ಯೆದೆಲೆ, 111. ಬೆಲ್ಲ, 112. ತೆಂಗಿನಕಡ್ಡಿ, 113. ಒಣದ್ರಾಕ್ಷಿ.

**ಅನುಸೂಚಿ**

ನೆಲ್ಯಾಡಿ ಗ್ರಾಮ ಪಂಚಾಯಿತಿ ಪರಿಮಿತಿಯೊಳಗೆ ಬರುವ ಒಟ್ಟು 10.41 ಎಕರೆ ಪ್ರದೇಶದ ಈ ಕೆಳಗಿನ ಸೀಮಾಬದ್ಧ ಸ್ಥಳ ;

ಪೂರ್ವಕ್ಕೆ - ಕೆ.ಎಸ್.ಆರ್.ಟಿ.ಸಿ. ಬಸ್ ನಿಲ್ದಾಣ

ಪಶ್ಚಿಮಕ್ಕೆ - ಚರ್ಚ್

ಉತ್ತರಕ್ಕೆ - ಶ್ರೀ ಕೆ.ವಿ. ತಂಗಚ್ಚನ್ ಕಟ್ಟಡ

ದಕ್ಷಿಣಕ್ಕೆ - ಬದ್ರಿಯಾ ಜುಮ್ಮಾ ಮಸೀದಿ

ಕಾಣಿಯೂರು ಗ್ರಾಮ ಪಂಚಾಯತಿ ಪರಿಮಿತಿಯೊಳಗೆ ಬರುವ ಒಟ್ಟು 31.89 ಎಕರೆ ಪ್ರದೇಶದ ಈ ಕೆಳಗಿನ ಸೀಮಾಬದ್ಧ ಸ್ಥಳ :

ಪೂರ್ವಕ್ಕೆ - ದುರ್ಗಾಪರಮೇಶ್ವರಿ ಅಮ್ಮನವರ ಗುಡಿ

ಪಶ್ಚಿಮಕ್ಕೆ - ಸರ್ಕಾರಿ ಪದವಿಪೂರ್ವ ಕಾಲೇಜು

ಉತ್ತರಕ್ಕೆ - ಸರ್ಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರ

ದಕ್ಷಿಣಕ್ಕೆ - ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ

ನೆಟ್ಟಣಿಗೆ - ಮಡ್ನೂರು ಗ್ರಾಮ ಪಂಚಾಯತಿ ಪರಿಮಿತಿಯೊಳಗೆ ಬರುವ ಈಶ್ವರ ಮಂಗಲದ ಒಟ್ಟು 16.65 1/4 ಎಕರೆ ಪ್ರದೇಶದ ಈ ಕೆಳಗಿನ ಸೀಮಾಬದ್ಧ ಸ್ಥಳ :

ಪೂರ್ವಕ್ಕೆ - ಟಿ.ವಿ. ಖಾದರ್ ರವರ ಕಾಂಪ್ಲೆಕ್ಸ್ ಕಟ್ಟಡ

ಪಶ್ಚಿಮಕ್ಕೆ - ಹೀರಾ ಕಾಂಪ್ಲೆಕ್ಸ್

ಉತ್ತರಕ್ಕೆ - ಹೋಟೆಲ್ ದುರ್ಗಾ ಕಟ್ಟಡ

ದಕ್ಷಿಣಕ್ಕೆ - ಬದ್ರಿಯಾ ಜುಮ್ಮಾ ಮಸೀದಿ

ಜಿ.ಎಸ್. ನಾರಾಯಣಸ್ವಾಮಿ,
ನಿರ್ದೇಶಕರು.

ಪಿ.ಆರ್. 1247

**ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಧಾರವಾಡ ವಿಭಾಗ, ಹುಬ್ಬಳ್ಳಿ**

**ಪ್ರ.ಸಂ. ಡಬ್ಲ್ಯೂಸಿಎ / ಎಫ್-98 / 06 / 1108, ದಿನಾಂಕ: 3ನೇ ಆಗಸ್ಟ್ 2006**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| ಶ್ರೀ ಅಬ್ರಾಹಮ್ s/o ಸಲಿಮನ್<br>r/o ಮಂಟೂರು ರೋಡ ವಲ್ಲಿಬಾಯಿನಗರ,<br>ಹುಬ್ಬಳ್ಳಿ,<br>ಶ್ರೀಮತಿ ರೋಜಮೇರಿ ಕೋಂ ಅಬ್ರಾಹಮ್ | | 1) ಅನು ಸ್ಟ್ರಕ್ಚರಲ್ & ಗಾಲ್ವಾನೆಸಿಂಗ್<br>ಇಂಡಸ್ಟ್ರೀಸ್, 61 A & B, 1 D.A.<br>ಫೇಜ. 1 ಚೆಂಪಲ್ಲಿ,<br>ಹೈದರಾಬಾದ. |

**ಪ್ರಕಟಣೆ**

ಶ್ರೀ ಕಲ್ಲುಕುಂಟ ವಿಜಯ ಕುಮಾರ್ -s/o ಕೆ. ಅಬ್ರಾಹಂ ಇವರ ಕೆ. ಅಬ್ರಾಹಮ್ ಮತ್ತು ರೋಜಮೇರಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಶ್ರೀ ಕೆ. ವಿಜಯಕುಮಾರ್ ಇವರು ಒಂದನೇ ಪ್ರತಿವಾದಿಗಳಾದ ಅನು ಸ್ಟ್ರಕ್ಚರಲ್ & ಗಾಲ್ವಾನೆಸಿಂಗ್ ಇವರಲ್ಲಿ ಎಂದು ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಭಂದವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ

ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂಥಹವರು ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು (ಮರಣಾಂತರ)
ಧಾರವಾಡ ವಿಭಾಗ, ಹುಬ್ಬಳ್ಳಿ.

ಪಿ.ಆರ್. 1230

**ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ**

**ಪ್ರ.ಸಂ. ನಕಾಅದಾ : ಕಾನಪ : CTA : ಸಿಆರ್-77 / 06, ದಿನಾಂಕ: 7ನೇ ಜುಲೈ**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

1) ಶ್ರೀಮತಿ ರೇಣುಕಮ್ಮ ಬಿನ್
ಲೇ: ಎ.ಆರ್. ಅಂಜನ್ ಕುಮಾರ್
@ ಎ.ಆರ್. ಆಂಜನೆಯ ಕುಮಾರ್
2) ಕು: ಎ.ಆರ್. ರಕ್ಷಿತಾ
3) ಕು: ಎ.ಆರ್. ದೀಕ್ಷಾ
ಎಲ್ಲರ ವಾಸ: ಬನಶಂಕರಿ ಬೀದಿ
ಹೊಸದುರ್ಗ ಟೌನ್,
ಚಿತ್ರದುರ್ಗ ಜಿಲ್ಲೆ.

1) ಕೆ. ಮುಜೀಬ್ ಖಾನ್ ಬಿನ್ ಬಾಷ ಸಾಬ್,
ಲಾರಿ ಮಾಲೀಕರು, ನಂ. ಕೆ.ಎ. 16 /
ಬಿ 7862,
ವಾಸ. ಸರ್ಕಾರಿ ಹೈಯರ್ ಸ್ಕೂಲ್ ಹಿಂಭಾಗ,
ಕಾಯಿಪೇಟೆ, ಹೊಸದುರ್ಗ ಟೌನ್.
2) ಬ್ರಾಂಚ್ ಮ್ಯಾನೇಜರ್,
ನ್ಯಾಷನಲ್ ಇನ್ಸೂರೆನ್ಸ್ ಕಂ. ಲಿ.,
ಲಕ್ಷ್ಮಿ ಬಜಾರ್, ಚಿತ್ರದುರ್ಗ.

**ಪ್ರಕಟಣೆ**

ಶ್ರೀ : ಶ್ರೀಮತಿ 1) ರೇಣುಕಮ್ಮ (ಹೆಂಡತಿ), 2) ಕು: ಎ.ಆರ್. ರಕ್ಷಿತಾ, 3) ಕು: ಎ.ಆರ್. ದೀಕ್ಷಾ ಇವರು ಮೃತ ಎ.ಆರ್. ಅಂಜನ್ ಕುಮರ್ @ ಆಂಜನೆಯ ಕುಮಾರ್ ಇವರ ಹೆಂಡತಿ ಮತ್ತು ಮಕ್ಕಳು ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಅಂಜನ್ ಕುಮಾರ್ @ ಆಂಜನೇಯಕುಮಾರ್ ರವರು ಒಂದನೇ ಪ್ರತಿವಾದಿಗಳಾದ ಕೆ. ಮುಜೀಬ್ ಖಾನ್ ಇವರ ಲಾರಿ ಯಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಸಹಾಯಕ ಕಾರ್ಮಿಕ ಆಯುಕ್ತರು
ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್. 1249

**ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ**

**ಪ್ರ.ಸಂ. ನಕಾಅದಾ : ಕಾನಪ : CTA : ಸಿಆರ್-78 / 2006, ದಿನಾಂಕ: 14ನೇ ಆಗಸ್ಟ್ 2006**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

1) Sri. Obaiah @ Kolal
obaiah S/o Boriah
2) Smt. Sanchalamma
w/o Kolal obaiah
3) K.O. Thippeswamy
All are R/o Banhbananahalli
Turuvanur Hobli,
Chitradurga Dist

1) Sri Chandrappa N.B.
s/o. Borappa,Retd theater owner of
Trackar Trillar R/o. Kellenavalli
village, Chitradurga (T) & (D)
2) The Branch Manager
National Insurance Company Ltd.
Chitradurga.

**ಪ್ರಕಟಣೆ**

ಶ್ರೀ Sri Obaiah @ Kolal obaiah 2) smt. Canchallamma 3) K.O. Thippeswamy ಇವರು Father & Mother & Brother ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ Sri Chandrappa ಇವರು Tractor, Trillor ರಲ್ಲಿ Coolie ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಸಹಾಯಕ ಕಾರ್ಮಿಕ ಆಯುಕ್ತರು
ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್. 1250

## ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಬಳ್ಳಾರಿ

## ಪ್ರಕಟಣೆ

**ನಂ. ಜಿಸಕಅ / ಎಸ್-6 / ಪ.ಜಾತಿ ಕಾ.ಪ.ತ. / ಸಿಆರ್ 19 / 06-07, ದಿನಾಂಕ: 31ನೇ ಜುಲೈ 2006**

**ವಿಷಯ:** 2006-07ನೇ ಸಾಲಿನಲ್ಲಿ ಪರಿಶಿಷ್ಟ ಜಾತಿಯ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡಲು ಅರ್ಜಿಗಳನ್ನು ಆಹ್ವಾನಿಸುವುದರ ಕುರಿತು.

**ಉಲ್ಲೇಖ:** 1) ಸರ್ಕಾರದ ಆದೇಶ ಸಂ. ಎಸ್.ಡಬ್ಲ್ಯು.ಎಸ್-681 / ಎಸ್.ಡಬ್ಲ್ಯು-89 / ಬೆಂಗಳೂರು, ದಿನಾಂಕ: 02.11.90.

2) ಸರ್ಕಾರದ ಆದೇಶ ಸಂ.ಸಕ.ಇ.-421 / ಪಕವಿ-95 / ಬೆಂಗಳೂರು, ದಿನಾಂಕ: 29.07.97.

3) ಆಯುಕ್ತರು, ಸ.ಕ.ಇ. ಬೆಂಗಳೂರು ಇವರ ಪ.ಸಂ.ಸಕ.ಇ / ಸಮನ್ವಯ-6 / ಸಿಆರ್-14 / 97-98, ದಿ: 07.08.97 ಮತ್ತು 14.10.97.

4) ಸರ್ಕಾರದ ಆದೇಶ ಸಂ.ಸಕ.ಇ-535 / ಸಕವಿ-2000, ಬೆಂಗಳೂರು, ದಿನಾಂಕ: 28.03.01.

5) ಸರ್ಕಾರಿ ಆದೇಶ ಸಂ. ಸಕಇ-349 / ಪಕವಿ-05, ದಿ: 28.01.06.

ಬಳ್ಳಾರಿ ಜಿಲ್ಲೆಯಲ್ಲಿರುವ ಪರಿಶಿಷ್ಟ ಜಾತಿಗೆ ಸೇರಿರುವ ಕಾನೂನು ಪದವೀಧರರಿಗೆ 2006-07ನೇ ಸಾಲಿಗೆ ಆಡಳಿತ ನ್ಯಾಯಾಧೀಕರಣದಲ್ಲಿ 4 ವರ್ಷಗಳ ತರಬೇತಿಯನ್ನು ನೀಡುವ ಸಲುವಾಗಿ ಅರ್ಹ ಪ.ಜಾತಿ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಈ ತರಬೇತಿಯನ್ನು ಪಡೆಯಲು ಇಚ್ಛಿಸುವ ಪ.ಜಾತಿಯ ಅಭ್ಯರ್ಥಿಗಳು ಈ ಕೆಳಕಂಡ ಅರ್ಹತೆಯನ್ನು ಕಡ್ಡಾಯವಾಗಿ ಹೊಂದಿರತಕ್ಕದ್ದು.

1) ಅಭ್ಯರ್ಥಿಗಳು ಪರಿಶಿಷ್ಟ ಜಾತಿಗೆ ಸೇರಿದವರಾಗಿರಬೇಕು.

2) ಬಳ್ಳಾರಿ ಜಿಲ್ಲೆಗೆ ಮಾತ್ರ ಸಂಬಂಧಿಸಿದ ಹಾಗೂ ವಕೀಲ ವೃತ್ತಿ ನಡೆಸಲು ಅರ್ಹತೆಯುಳ್ಳ ಕಾನೂನು ಪದವೀಧರರು ಮಾತ್ರ ಈ ತರಬೇತಿಗೆ ಅರ್ಹರು.

3) ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ 2 ವರ್ಷದೊಳಗೆ ಕಾನೂನು ಪದವಿಯನ್ನು ಪಡೆದಿರಬೇಕು. (ಅರ್ಜಿಯೊಂದಿಗೆ ಕಾನೂನು ಪದವಿಯ 3 ವರ್ಷದ ಅಂಕಪಟ್ಟಿಗಳ ಜೆರಾಕ್ಸ್ ಪ್ರತಿಗಳನ್ನು ಸಲ್ಲಿಸತಕ್ಕದ್ದು.)

4) ಅಭ್ಯರ್ಥಿಯ ವಯಸ್ಸು, ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕದಂದು 35 ವರ್ಷಗಳನ್ನು ಮೀರಿರಬಾರದು. ಈ ಕುರಿತು ಅಧಿಕೃತ ಪ್ರಮಾಣ ಪತ್ರ (ಎಸ್.ಎಸ್.ಎಲ್.ಸಿ.) ಅಂಕಪಟ್ಟಿ ಪ್ರತಿ ಲಗತ್ತಿಸಬೇಕು.

5) ಈ ತರಬೇತಿಗೆ ಅರ್ಜಿಯನ್ನು ಸಲ್ಲಿಸಲು ಇಚ್ಛಿಸುವ ಅಭ್ಯರ್ಥಿಗಳು ಅರ್ಜಿಗಳನ್ನು ದ್ವಿಪ್ರತಿಗಳಲ್ಲಿ ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಎಲ್ಲಾ ಪರೀಕ್ಷೆಗಳ ಅಂಕಪಟ್ಟಿಗಳ ಜೆರಾಕ್ಸ್ ಮತ್ತು ಜಾತಿ ಪ್ರಮಾಣ ಪತ್ರ ಬಾರ್ ಕೌನ್ಸಿಲ್‌ನಲ್ಲಿ ನೊಂದಣಿ ಮಾಡಿದ ಪ್ರಮಾಣ ಪತ್ರದ ದೃಢೀಕೃತ ಪ್ರತಿಗಳೊಂದಿಗೆ ಸಲ್ಲಿಸಬೇಕು.

6) ಈಗಾಗಲೇ ಕಾನೂನು ವಿಷಯದಲ್ಲಿ ಯಾವುದಾದರೂ ತರಬೇತಿ ಪಡೆದಿರಬಾರದು.

**ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.**

1) ಈ ತರಬೇತಿಗೆ ಪ.ಜಾತಿಯ 15 ಅಭ್ಯರ್ಥಿಗಳನ್ನು ಮಾತ್ರ ಆಯ್ಕೆ ಮಾಡಲಾಗುವುದು.

2) ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ನ್ಯಾಯಾಂಗ ಆಡಳಿತ ತರಬೇತಿಯನ್ನು ಸರ್ಕಾರಿ ವಕೀಲರು, ಪಬ್ಲಿಕ್ ಪ್ರಾಸಿಕ್ಯೂಟರ್ ಅಥವಾ 20 ವರ್ಷಗಳ ಅನುಭವ ಹೊಂದಿರುವ ಹಿರಿಯ ವಕೀಲರಲ್ಲಿ ನೀಡಲಾಗುವುದು. ಈ ವಿಷಯದ ಬಗ್ಗೆ ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮವಾದದ್ದು.

3) ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾಹೆಯಾನ ರೂ. 1,000/- (ರೂ ಒಂದು ಸಾವಿರ ಮಾತ್ರ) 4 ವರ್ಷದ ವರೆಗು ಸ್ಟೈಫಂಡ್ ನೀಡಲಾಗುವುದು.

4) ಈ ತರಬೇತಿಗೆ ಅಭ್ಯರ್ಥಿಗಳನ್ನು ಮಾನ್ಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಬಳ್ಳಾರಿ ಇವರ ಅಧ್ಯಕ್ಷತೆಯಲ್ಲಿ ರಚಿತವಾದ ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯ ಸಂದರ್ಶನದ ಮೂಲಕ ಆಯ್ಕೆ ಮಾಡಲಾಗುವುದು.

5) ಆಯ್ಕೆಯಾದ ಅಭ್ಯರ್ಥಿಗಳು ತರಬೇತಿಯನ್ನು ಮಧ್ಯದಲ್ಲಿ ಬಿಟ್ಟುಹೋಗಬಾರದು (ಕೇಂದ್ರ / ರಾಜ್ಯ ಸರ್ಕಾರದಲ್ಲಿ ಉದ್ಯೋಗ ದೊರೆತ ಅಭ್ಯರ್ಥಿಗಳಿಗೆ ಈ ನಿಬಂಧನೆ ಅನ್ವಯಿಸುವುದಿಲ್ಲ).

6) ಆಯ್ಕೆಯಾದ ಅಭ್ಯರ್ಥಿಗಳು ಸುಳ್ಳು ಮಾಹಿತಿ ಧಾಖಲೆ ಒದಗಿಸಿದ್ದಲ್ಲಿ, ಅಂತಹವರನ್ನು ಕಾನೂನಿನ ಶಿಸ್ತಿನ ಕ್ರಮಕ್ಕೆ ಒಳಪಡಿಸಲಾಗುವುದು. ಹಾಗೂ ತರಬೇತಿಯನ್ನು ಮದ್ಯದಲ್ಲಿ ಬಿಟ್ಟುಹೋದಲ್ಲಿ, ಅಂತಹವರಿಗೆ ನೀಡಿದ ಸ್ಟೈಫಂಡ್ ಹಣವನ್ನು ಶೆ. 10% ರಷ್ಟು ಬಡ್ಡಿ ಸೇರಿಸಿ, ಭೂ ಕಂದಾಯ ಬಾಕಿ ಎಂದು ಪರಿಗಣಿಸಿ, ವಸೂಲಿ ಮಾಡಲಾಗುವುದು. ಈ ಬಗ್ಗೆ ಆಯ್ಕೆಯಾದ ಅಭ್ಯರ್ಥಿಗಳು ಕರಾರು ಪತ್ರವನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ಬರದುಕೊಡತಕ್ಕದ್ದು.

7) ಸಂದರ್ಶನದಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾತ್ರ ಈ ಕಛೇರಿಯಿಂದ ತಿಳಿಸಲಾಗುವುದು. ಹಾಗೂ ತರಬೇತಿ ಪಡೆಯಲು ಆಯ್ಕೆಯಾದ ಅಭ್ಯರ್ಥಿಗಳು ಆಯ್ಕೆ ಪತ್ರ ತಲುಪಿದ 15 ದಿನಗಳೊಳಗಾಗಿ ತಮ್ಮ ಒಪ್ಪಿಗೆ ಪತ್ರವನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ಸಲ್ಲಿಸತಕ್ಕದ್ದು.

8) ಪೂರ್ಣ ಭರ್ತಿ ಮಾಡಿದ ಅರ್ಜಿಗಳನ್ನು (ದ್ವಿ ಪ್ರತಿಗಳಲ್ಲಿ) ಕಾರ್ಯದರ್ಶಿಗಳು, ಜಿಲ್ಲಾ ಮಟ್ಟದ ನ್ಯಾಯಾಂಗ ತರಬೇತಿ ಆಯ್ಕೆ ಸಮಿತಿ ಮತ್ತು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ದಿನಾಂಕ: 16.10.2006ರ ಸಾಯಂಕಾಲ 5.30 ಗಂಟೆಯೊಳಗೆ ಸಲ್ಲಿಸತಕ್ಕದ್ದು.

9) ಅಪೂರ್ಣ ಮಾಹಿತಿ ಸಲ್ಲಿಸಿದ ಹಾಗೂ ಅನರ್ಹ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಹಕ್ಕು ಆಯ್ಕೆ ಸಮಿತಿಗೆ ಇರುತ್ತದೆ.

**ಸೂಚನೆ :** ಅರ್ಜಿಗಳನ್ನು ಮತ್ತು ಹೆಚ್ಚಿನ ಮಾಹಿತಿಯನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಬಳ್ಳಾರಿ ಹಾಗೂ ಸಂಬಂಧಪಟ್ಟ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಿಂದ ಪಡೆಯತಕ್ಕದ್ದು.

**ಎಂ.ವಿ. ಶ್ರೀನಿವಾಸುಲು,**

ಪಿ.ಆರ್. 1251

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ, ಹಾಗೂ ಸದಸ್ಯ ಕಾರ್ಯದರ್ಶಿ,
ಕಾನೂನು ಪದವೀಧರರ ನ್ಯಾಯಾಂಗ
ಆಡಳಿತ ತರಬೇತಿ ಆಯ್ಕೆ ಸಮಿತಿ, ಬಳ್ಳಾರಿ.

## ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಬಳ್ಳಾರಿ

## ಪ್ರಕಟಣೆ

**ನಂ. ಜಿಸಕಅ / ಎಸ್-6 / ಕಾ.ಪ.ತ. / ಸಿಆರ್ 20 / 06-07, ದಿನಾಂಕ: 31ನೇ ಜುಲೈ 2006**

**ವಿಷಯ:** 2006-07ನೇ ಸಾಲಿನಲ್ಲಿ ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡಲು ಅರ್ಜಿಗಳನ್ನು ಆಹ್ವಾನಿಸುವುದರ ಕುರಿತು.

**ಉಲ್ಲೇಖ:** 1) ಸರ್ಕಾರದ ಆದೇಶ ಸಂ. ಎಸ್.ಡಬ್ಲ್ಯೂ.ಎಸ್-681 / ಎಸ್.ಡಬ್ಲ್ಯೂ-89 / ಬೆಂಗಳೂರು, ದಿನಾಂಕ: 02.11.90.

2) ಸರ್ಕಾರದ ಆದೇಶ ಸಂ.ಸಕ.ಇ.-421 / ಪಕವಿ-95 / ಬೆಂಗಳೂರು, ದಿನಾಂಕ: 29.07.97.

3) ಆಯುಕ್ತರು, ಸ.ಕ.ಇ. ಬೆಂಗಳೂರು ಇವರ ಪ.ಸಂ.ಸಕ.ಇ / ಸಮನ್ವಯ-6 / ಸಿಆರ್-14 / 97-98, ದಿ: 07.08.97 ಮತ್ತು 14.10.97.

4) ಸರ್ಕಾರದ ಆದೇಶ ಸಂ.ಸಕ.ಇ-535 / ಸಕವಿ-2000, ಬೆಂಗಳೂರು, ದಿನಾಂಕ: 28.03.01.

5) ಸರ್ಕಾರಿ ಆದೇಶ ಸಂ. ಸಕಇ-349 / ಪಕವಿ-05, ದಿ: 28.01.06.

ಬಳ್ಳಾರಿ ಜಿಲ್ಲೆಯಲ್ಲಿರುವ ಪರಿಶಿಷ್ಟ ವರ್ಗಕ್ಕೆ ಸೇರಿರುವ ಕಾನೂನು ಪದವೀಧರರಿಗೆ 2006-07ನೇ ಸಾಲಿಗೆ ಆಡಳಿತ ನ್ಯಾಯಾಧೀಕರಣದಲ್ಲಿ 4 ವರ್ಷಗಳ ತರಬೇತಿಯನ್ನು ನೀಡುವ ಸಲುವಾಗಿ ಅರ್ಹ ಪರಿಶಿಷ್ಟ ವರ್ಗದ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಈ ತರಬೇತಿಯನ್ನು ಪಡೆಯಲು ಇಚ್ಛಿಸುವ ಪ.ವರ್ಗದ ಅಭ್ಯರ್ಥಿಗಳು ಈ ಕೆಳಕಂಡ ಅರ್ಹತೆಯನ್ನು ಕಡ್ಡಾಯವಾಗಿ ಹೊಂದಿರತಕ್ಕದ್ದು.

1) ಅಭ್ಯರ್ಥಿಗಳು ಪರಿಶಿಷ್ಟ ವರ್ಗಕ್ಕೆ ಸೇರಿದವರಾಗಿರಬೇಕು.
2) ಬಳ್ಳಾರಿ ಜಿಲ್ಲೆಗೆ ಮಾತ್ರ ಸಂಬಂಧಿಸಿದ ಹಾಗೂ ವಕೀಲ ವೃತ್ತಿ ನಡೆಸಲು ಅರ್ಹತೆಯುಳ್ಳ ಕಾನೂನು ಪದವೀಧರರು ಮಾತ್ರ ಈ ತರಬೇತಿಗೆ ಅರ್ಹರು.
3) ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ 2 ವರ್ಷದೊಳಗೆ ಕಾನೂನು ಪದವಿಯನ್ನು ಪಡೆದಿರಬೇಕು. (ಅರ್ಜಿಯೊಂದಿಗೆ ಕಾನೂನು ಪದವಿಯ 3 ವರ್ಷದ ಅಂಕಪಟ್ಟಿಗಳ ಜೆರಾಕ್ಸ್ ಪ್ರತಿಗಳನ್ನು ಸಲ್ಲಿಸತಕ್ಕದ್ದು.)
4) ಅಭ್ಯರ್ಥಿಯ ವಯಸ್ಸು, ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕದಂದು 35 ವರ್ಷಗಳನ್ನು ಮೀರಿರಬಾರದು. ಈ ಕುರಿತು ಅಧಿಕೃತ ಪ್ರಮಾಣ ಪತ್ರ (ಎಸ್.ಎಸ್.ಎಲ್.ಸಿ.) ಅಂಕಪಟ್ಟಿ ಪ್ರತಿ ಲಗತ್ತಿಸಬೇಕು.
5) ಈ ತರಬೇತಿಗೆ ಅರ್ಜಿಯನ್ನು ಸಲ್ಲಿಸಲು ಇಚ್ಛಿಸುವ ಅಭ್ಯರ್ಥಿಗಳು ಅರ್ಜಿಗಳನ್ನು ದ್ವಿಪ್ರತಿಗಳಲ್ಲಿ ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಎಲ್ಲಾ ಪರೀಕ್ಷೆಗಳ ಅಂಕಪಟ್ಟಿಗಳ ಜೆರಾಕ್ಸ್ ಮತ್ತು ಜಾತಿ ಪ್ರಮಾಣ ಪತ್ರ ಬಾರ್ ಕೌನ್ಸಿಲ್‌ನಲ್ಲಿ ನೊಂದಣಿ ಮಾಡಿದ ಪ್ರಮಾಣ ಪತ್ರದ ದೃಡೀಕೃತ ಪ್ರತಿಗಳೊಂದಿಗೆ ಸಲ್ಲಿಸಬೇಕು.
6) ಈಗಾಗಲೇ ಕಾನೂನು ವಿಷಯದಲ್ಲಿ ಯಾವುದಾದರೂ ತರಬೇತಿ ಪಡೆದಿರಬಾರದು.

**ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.**

1) ಈ ತರಬೇತಿಗೆ ಪರಿಶಿಷ್ಟ ವರ್ಗದ 03 ಅಭ್ಯರ್ಥಿಗಳನ್ನು ಮಾತ್ರ ಆಯ್ಕೆ ಮಾಡಲಾಗುವುದು.
2) ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ನ್ಯಾಯಾಂಗ ಆಡಳಿತ ತರಬೇತಿಯನ್ನು ಸರ್ಕಾರಿ ವಕೀಲರು, ಪಬ್ಲಿಕ್ ಪ್ರಾಸಿಕ್ಯೂಟರ್ ಅಥವಾ 20 ವರ್ಷಗಳ ಅನುಭವ ಹೊಂದಿರುವ ಹಿರಿಯ ವಕೀಲರಲ್ಲಿ ನೀಡಲಾಗುವುದು. ಈ ವಿಷಯದ ಬಗ್ಗೆ ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮವಾದದ್ದು.
3) ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾಹೆಯಾನ ರೂ. 1,000/- (ರೂ ಒಂದು ಸಾವಿರ ಮಾತ್ರ) 4 ವರ್ಷದ ವರೆಗು ಸ್ಟೈಫಂಡ್ ನೀಡಲಾಗುವುದು.
4) ಈ ತರಬೇತಿಗೆ ಅಭ್ಯರ್ಥಿಗಳನ್ನು ಮಾನ್ಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಬಳ್ಳಾರಿ ಇವರ ಅಧ್ಯಕ್ಷತೆಯಲ್ಲಿ ರಚಿತವಾದ ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯ ಸಂದರ್ಶನದ ಮೂಲಕ ಆಯ್ಕೆ ಮಾಡಲಾಗುವುದು.
5) ಆಯ್ಕೆಯಾದ ಅಭ್ಯರ್ಥಿಗಳು ತರಬೇತಿಯನ್ನು ಮಧ್ಯದಲ್ಲಿ ಬಿಟ್ಟುಹೋಗಬಾರದು (ಕೇಂದ್ರ / ರಾಜ್ಯ ಸರ್ಕಾರದಲ್ಲಿ ಉದ್ಯೋಗ ದೊರೆತ ಅಭ್ಯರ್ಥಿಗಳಿಗೆ ಈ ನಿಬಂಧನೆ ಅನ್ವಯಿಸುವುದಿಲ್ಲ).
6) ಆಯ್ಕೆಯಾದ ಅಭ್ಯರ್ಥಿಗಳು ಸುಳ್ಳು ಮಾಹಿತಿ ಧಾಖಲೆ ಒದಗಿಸಿದ್ದಲ್ಲಿ, ಅಂತಹವರನ್ನು ಕಾನೂನಿನ ಶಿಸ್ತಿನ ಕ್ರಮಕ್ಕೆ ಒಳಪಡಿಸಲಾಗುವುದು. ಹಾಗೂ ತರಬೇತಿಯನ್ನು ಮದ್ಯದಲ್ಲಿ ಬಿಟ್ಟುಹೋದಲ್ಲಿ, ಅಂತಹವರಿಗೆ ನೀಡಿದ ಸ್ಟೈಫಂಡ್ ಹಣವನ್ನು ಶೆ. 10% ರಷ್ಟು ಬಡ್ಡಿ ಸೇರಿಸಿ, ಭೂ ಕಂದಾಯ ಬಾಕಿ ಎಂದು ಪರಿಗಣಿಸಿ, ವಸೂಲಿ ಮಾಡಲಾಗುವುದು. ಈ ಬಗ್ಗೆ ಆಯ್ಕೆಯಾದ ಅಭ್ಯರ್ಥಿಗಳು ಕರಾರು ಪತ್ರವನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ಬರದುಕೊಡತಕ್ಕದ್ದು.

7) ಸಂದರ್ಶನದಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾತ್ರ ಈ ಕಛೇರಿಯಿಂದ ತಿಳಿಸಲಾಗುವುದು. ಹಾಗೂ ತರಬೇತಿ ಪಡೆಯಲು ಆಯ್ಕೆಯಾದ ಅಭ್ಯರ್ಥಿಗಳು ಆಯ್ಕೆ ಪತ್ರ ತಲುಪಿದ 15 ದಿನಗಳೊಳಗಾಗಿ ತಮ್ಮ ಒಪ್ಪಿಗೆ ಪತ್ರವನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ಸಲ್ಲಿಸತಕ್ಕದ್ದು.

8) ಪೂರ್ಣ ಭರ್ತಿ ಮಾಡಿದ ಅರ್ಜಿಗಳನ್ನು (ದ್ವಿ ಪ್ರತಿಗಳಲ್ಲಿ) ಕಾರ್ಯದರ್ಶಿಗಳು, ಜಿಲ್ಲಾ ಮಟ್ಟದ ನ್ಯಾಯಾಂಗ ತರಬೇತಿ ಆಯ್ಕೆ ಸಮಿತಿ ಮತ್ತು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ದಿನಾಂಕ: 16.10.2006ರ ಸಾಯಂಕಾಲ 5.30 ಗಂಟೆಯೊಳಗೆ ಸಲ್ಲಿಸತಕ್ಕದ್ದು.

9) ಅಪೂರ್ಣ ಮಾಹಿತಿ ಸಲ್ಲಿಸಿದ ಹಾಗೂ ಅನರ್ಹ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಹಕ್ಕು ಆಯ್ಕೆ ಸಮಿತಿಗೆ ಇರುತ್ತದೆ.

**ಸೂಚನೆ :** ಅರ್ಜಿಗಳನ್ನು ಮತ್ತು ಹೆಚ್ಚಿನ ಮಾಹಿತಿಯನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಬಳ್ಳಾರಿ ಹಾಗೂ ಸಂಬಂಧಪಟ್ಟ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಿಂದ ಪಡೆಯತಕ್ಕದ್ದು.

**ಎಂ.ವಿ. ಶ್ರೀನಿವಾಸುಲು,**

ಪಿ.ಆರ್. 1252

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ, ಹಾಗೂ ಸದಸ್ಯ ಕಾರ್ಯದರ್ಶಿ,
ಕಾನೂನು ಪದವೀಧರರ ನ್ಯಾಯಾಂಗ
ಆಡಳಿತ ತರಬೇತಿ ಆಯ್ಕೆ ಸಮಿತಿ, ಬಳ್ಳಾರಿ.

**ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ರಕ್ಷಣೆ ಮತ್ತು ನಿರ್ವಹಣೆ) ರವರ ಕಛೇರಿ, ಬೆಂಗಳೂರು ರವರ**
**ಅಧಿಸೂಚನೆ ಸಂಖ್ಯೆ: ಎ10 / ಸ್ಟೋರ್ಸ್ / ಸಿಆರ್-13 / ಹ್ಯಾ / 00-01**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಗೆ ನಮೂದಿಸಿದಂತೆ ಹ್ಯಾಮರ್ ಸೀಲುಗಳನ್ನು ಹೊಸದಾಗಿ ಸೃಜಿಸಿದ ವನ್ಯಜೀವಿ ವಿಭಾಗಗಳಿಗೆ ವಿತರಿಸಲಾಗಿದೆ.

| ವಿಭಾಗದ ಹೆಸರು | ವಿಭಾಗದ ಕೋಡ್ ಸಂಖ್ಯೆ | ಸಿಂಗಲ್ ಎಂಡೆಡ್ | ಡಬಲ್ ಎಂಡೆಡ್ | ಒಟ್ಟು |
|---|---|---|---|---|
| **ಭದ್ರ ವನ್ಯಜೀವಿ ವಿಭಾಗ** | | | | |
| ವಲಯ ಅರಣ್ಯಾಧಿಕಾರಿ | LX | 5 | 2 | 7 |
| ವನಪಾಲಕ | | 10 | - | 10 |
| ಅರಣ್ಯ ರಕ್ಷಕ | | 5 | - | 5 |
| ಒಟ್ಟು | | **20** | **2** | **22** |
| **ಹುಣಸೂರು ವನ್ಯಜೀವಿ ವಿಭಾಗ** | | | | |
| ವಲಯ ಅರಣ್ಯಾಧಿಕಾರಿ | CCCLXXX | 11 | 2 | 13 |
| ವನಪಾಲಕ | | 15 | - | 15 |
| ಅರಣ್ಯ ರಕ್ಷಕ | | 28 | - | 28 |
| ಉಪ ಅರಣ್ಯ ಸಂರಕ್ಷಣಾಧಿಕಾರಿ | | 1 | - | 1 |
| ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ | | 3 | - | 3 |
| ಒಟ್ಟು | | **58** | **2** | **60** |
| **ಚಾಮರಾಜನಗರ ವನ್ಯಜೀವಿ ವಿಭಾಗ** | | | | |
| ವಲಯ ಅರಣ್ಯಾಧಿಕಾರಿ | C | 5 | 2 | 7 |
| ವನಪಾಲಕ | | 6 | - | 6 |
| ಅರಣ್ಯ ರಕ್ಷಕ | | 7 | - | 7 |
| ಉಪ ಅರಣ್ಯ ಸಂರಕ್ಷಣಾಧಿಕಾರಿ | | 1 | - | 1 |
| ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ | | 2 | - | 2 |
| ಒಟ್ಟು | | **21** | **2** | **23** |
| **ಶಿವಮೊಗ್ಗ ವನ್ಯಜೀವಿ ವಿಭಾಗ** | | | | |
| ವಲಯ ಅರಣ್ಯಾಧಿಕಾರಿ | DXL | 2 | 3 | 5 |
| ವನಪಾಲಕ | | 10 | - | 10 |
| ಅರಣ್ಯ ರಕ್ಷಕ | | 16 | - | 16 |
| ಒಟ್ಟು | | **28** | **3** | **31** |

| | | | | |
|---|---|---|---|---|
| **ಕಾವೇರಿ ವನ್ಯಜೀವಿ ವಿಭಾಗ** | | | | |
| ವಲಯ ಅರಣ್ಯಾಧಿಕಾರಿ | CDXV | 1 | - | 1 |
| **ಕುದುರೇಮುಖ ವನ್ಯಜೀವಿ ವಿಭಾಗ** | | | | |
| ವಲಯ ಅರಣ್ಯಾಧಿಕಾರಿ | CD | 9 | - | 9 |
| ವನಪಾಲಕ | | 15 | - | 15 |
| ಅರಣ್ಯ ರಕ್ಷಕ | | 15 | - | 15 |
| ಒಟ್ಟು | | **39** | - | **39** |

ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ
(ರಕ್ಷಣೆ ಮತ್ತು ನಿರ್ವಹಣೆ).

ಪಿ.ಆರ್. 1255

**ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಕೊಡಗು ಜಿಲ್ಲೆ, ಮಡಿಕೇರಿ**

**ಪ್ರಕಟಣೆ**

**ನಂ. ಜಿಸಕಅ : ಕಾಪಸ : ಸಿಆರ್ 4 : 2006-07, ದಿನಾಂಕ: 28ನೇ ಜೂನ್ 2006**

**ವಿಷಯ:** ಆಡಳಿತ ನ್ಯಾಯಾಧೀಕರಣ ಯೋಜನೆಯಡಿಯಲ್ಲಿ ಪರಿಶಿಷ್ಟ ಜಾತಿ : ಪ.ವರ್ಗದ ಕಾನೂನು ಪದವೀಧರರಿಗೆ ತರಬೇತಿ ನೀಡುವ ಬಗ್ಗೆ.

**ಉಲ್ಲೇಖ:** ಸರ್ಕಾರಿ ಆದೇಶ ಸಂ: ಸಕಇ : 349 : ಪಕವಿ : 2005, ಬೆಂಗಳೂರು, ದಿನಾಂಕ: 28.1.2006.

2006-07ನೇ ಸಾಲಿಗೆ ಕೊಡಗು ಜಿಲ್ಲೆಯ ವ್ಯಾಪ್ತಿಯಲ್ಲಿನ ತಾಲ್ಲೂಕುಗಳಿಂದ ಆಡಳಿತ ನ್ಯಾಯಾಧೀಕರಣ ಯೋಜನೆಯಡಿ ತರಬೇತಿ ನೀಡಲು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಂದ ಅರ್ಜಿಯನ್ನು ಆಹ್ವಾನಿಸಲಾಗಿದೆ. ಇಚ್ಛೆಯುಳ್ಳವರು ಈ ಕೆಳಗೆ ನಮೂದಿಸಿರುವ ಷರತ್ತುಗಳನ್ನು ಪೂರೈಸಬಲ್ಲವರು ಮಾತ್ರ ಅರ್ಜಿಯನ್ನು ಸಲ್ಲಿಸ ಬಹುದಾಗಿರುತ್ತದೆ. ನಿಗಧಿತ ಅರ್ಜಿಯನ್ನು ಈ ಕಛೇರಿಯಿಂದ ಪಡೆಯಬಹುದು. ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡ ದಿನಾಂಕದಿಂದ ಒಂದು ತಿಂಗಳೊಳಗಾಗಿ ಅರ್ಜಿಯನ್ನು ಸಲ್ಲಿಸಬೇಕು. ನಂತರ ಬಂದ ಅರ್ಜಿಗಳನ್ನು ಪರಿಗಣಿಸುವುದಿಲ್ಲ. ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಬೇಕಾದ ವಿಳಾಸ :

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು,
ಕೊಡಗು ಜಿಲ್ಲೆ - ಕೋಟೆ ಆವರಣ,
ಮಡಿಕೇರಿ.

**ಷರತ್ತುಗಳು :**

1) ಅರ್ಜಿಯನ್ನು ಸಲ್ಲಿಸುವ ಅಭ್ಯರ್ಥಿಯು ಕೊಡಗು ಜಿಲ್ಲೆಯವರಾಗಿರಬೇಕು.
2) ಅಭ್ಯರ್ಥಿಗಳು 35 ವರ್ಷದೊಳಗಿನ ವಯೋಮಿತಿಯಲ್ಲಿರಬೇಕು.
3) ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕಕ್ಕೆ ಮೊದಲು 2 ವರ್ಷಗಳ ಒಳಗಡೆ ಕಾನೂನು ಪದವಿ ಪಡೆದಿರಬೇಕು.
4) ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪ್ರಾಸಿಕ್ಯೂಟರ್ ಬಳಿ ಅಥವಾ 20 ವರ್ಷಕ್ಕಿಂತ ಹೆಚ್ಚಿನ ಅನುಭವ ಹೊಂದಿರುವ ವಕೀಲರ ಬಳಿ ತರಬೇತಿಗೆ ನಿಯೋಜಿಸಲಾಗುವುದು. ಯಾರ ಬಳಿ ತರಬೇತಿಗೆ ನಿಯೋಜಿಸಬೇಕು ಎಂಬ ಬಗ್ಗೆ ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮವಾಗಿರುತ್ತದೆ.
5) ಆಯ್ಕೆಯಾದ ಅಭ್ಯರ್ಥಿಗಳು ಯಾವುದೇ ಕಾರಣಕ್ಕೂ ತರಬೇತಿಯನ್ನು ಪೂರ್ಣಗೊಳಿಸದೇ ಬಿಟ್ಟು ಹೋಗಬಾರದು. ರಾಜ್ಯ ಅಥವಾ ಕೇಂದ್ರ ಸರ್ಕಾರಿ ನೌಕರಿ ಸಿಕ್ಕಿದ್ದಲ್ಲಿ ಮಾತ್ರ ನಿಯಮಾನುಸಾರ ಸಡಿಲಗೊಳಿಸಲಾಗುವುದು. ಒಂದು ವೇಳೆ ತರಬೇತಿ ಬಿಟ್ಟು ಹೋದರೆ ಅಂತಹವರ ಶಿಷ್ಯವೇತನವನ್ನು ನಿಯಮಾನುಸಾರ ವಸೂಲಿ ಮಾಡಲಾಗುವುದು.
6) ತರಬೇತಿ ಅವಧಿಯು 4 ವರ್ಷಗಳಾಗಿದ್ದು ಮಾಸಿಕ ರೂ. 1000-00 ಗಳ ಶಿಷ್ಯ ವೇತನವನ್ನು ನೀಡಲಾಗುವುದು.
7) ಸುಳ್ಳು ಜಾತಿ ಮಾಹಿತಿ ದಾಖಲಾತಿಗಳನ್ನು ಒದಗಿಸಿ ಆಯ್ಕೆಯಾದ ಅಭ್ಯರ್ಥಿಗಳನ್ನು ಕಾನೂನಿನ ಪ್ರಕಾರ ಶಿಕ್ಷೆಗೆ ಗುರಿಪಡಿಸಲಾಗುವುದು ಹಾಗೂ ಅಂತಹ ಅಭ್ಯರ್ಥಿಗಳಿಂದ ತರಬೇತಿ ಅವಧಿಯಲ್ಲಿ ನೀಡಿದ ಶಿಷ್ಯವೇತನವನ್ನು ಶೇ. 10ರ ಬಡ್ಡಿಯೊಂದಿಗೆ ವಸೂಲಿ ಮಾಡಲಾಗುವುದು.
8) ಅರ್ಜಿಯಲ್ಲಿ ಪೂರ್ಣ ಮಾಹಿತಿ ಇಲ್ಲದಿದ್ದ ಪಕ್ಷದಲ್ಲಿ ಅರ್ಜಿ ಅಪೂರ್ಣವಾಗಿದ್ದಲ್ಲಿ ಅಮತಹ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ.
9) ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮವಾಗಿರುತ್ತದೆ.

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 1256

**ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಬಿಜಾಪೂರ**

**ಪ್ರಕಟಣೆ**

**ನಂ. ಜಿಸಕ / ಲೆಕ್ಕ / ಕಾಪಅ / ಸಿಆರ್ / 2006-07, ದಿನಾಂಕ: 16ನೇ ಆಗಸ್ಟ್ 2006**

ಸಮಾಜ ಕಲ್ಯಾಣ ಇಲಾಖೆಯಿಂದ ಸನ್ 2006-07 ನೇ ಸಾಲಿಗಾಗಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ವರ್ಗ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರ ತರಬೇತಿ ನೀಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಅವ್ಹಾನಿಸಲಾಗಿದೆ ಬಿಜಾಪೂರ ಜಿಲ್ಲೆಯಲ್ಲಿ ವಾಸವಾಗಿರುವ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟವರ್ಗ ಕಾನೂನು ಪದವೀಧರರು ಈ ಕೆಳಕಂಡ ಅರ್ಹತೆ ಮತ್ತು ದಾಖಲೆಗಳನ್ನು ಹೊಂದಿದವರು ದಿನಾಂಕ: 15.9.2006 ರೊಗಳಗಾಗಿ ಅರ್ಜಿ ಸಲ್ಲಿಸಲು ತಿಳಿಸಲಾಗಿದೆ.

1) ಈ ಯೋಜನೆಯಡಿ ಅರ್ಜಿದಾರರು ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ವರ್ಗದ ಜಾತಿಗೆ ಸೇರಿದವರಾಗಿರಬೇಕು. (ದೃಡೀಕೃತ ಜಾತಿ ಪ್ರಮಾಣ ಪತ್ರ ಲಗತ್ತಿಸಬೇಕು) ಹಾಗೂ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕಕ್ಕೆ ಎರಡು ವರ್ಷದಿಂದಾ ಈಚೆಗೆ ಕಾನೂನು ಪದವಿಯಲ್ಲಿ ಉತ್ತೀರ್ಣರಾಗಿರಬೇಕು. ಅಂದರೆ ದಿನಾಂಕ 16.8.2004 ರಿಂದಾ 15.8.2006 ರಲ್ಲಿ ಅಂತಿಮ ಕಾನೂನು ಪದವಿ ಪಾಸಮಾಡಿರಬೇಕು.
2) ವಕೀಲ ವೃತ್ತಿಯನ್ನು ನಡೆಸಲು ಅರ್ಹತೆ ಪಡೆದಿರುವ ಕಾನೂನು ಪದವೀಧರರು ಮಾತ್ರ ಅರ್ಜಿಸಲ್ಲಿಸತಕ್ಕದ್ದು.
3) ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ವಯಸ್ಸು 18 ರಿಂದ 35 ವರ್ಷ ಇರಬೇಕು.
4) ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳು ತರಬೇತಿ ಅವಧಿಯ ಮದ್ಯದಲ್ಲಿ ಬಿಟ್ಟು ಹೋಗಬಾರದು. ಒಂದು ವೇಳೆ ಬಿಟ್ಟು ಹೊದಲ್ಲಿ ಶಿಷ್ಯವೇನತದ ಮೊತ್ತವನ್ನು ಕಂದಾಯ ಬಾಕಿ ಅಂತಾ ವಸೂಲಿ ಮಾಡಲಾಗುವುದು.
5) ತರಬೇತಿಯ ಅವಧಿ ನಾಲ್ಕು (4) ವರ್ಷಗಳದ್ದು ಆಗಿದ್ದು ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ಪ್ರತಿ ತಿಂಗಳು ರೂ. 1000-00 ರಂತೆ ತರಬೇತಿ ಸ್ಟೈಫಂಡ ನೀಡಲಾಗುವುದು.
6) ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಶಿಕ್ಯೂಟರ್ ಸರ್ಕಾರಿ ವಕೀಲರು ಅಥವಾ 20 ವರ್ಷಕ್ಕೂ ವಕೀಲ ವೃತ್ತಿ ನಡೆಸಿದ ಖಾಸಗಿ ವಕೀಲರುಗಳ ಬಳಿ ತರಬೇತಿಗೆ ನಿಯೋಜಿಸಲಾಗುವುದು.
7) ಅವಧಿ ಮೀರಿ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಅರ್ಹ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಭರ್ತಿಮಾಡಿ ಆದಾಯ ಪ್ರಮಾಣ ಪತ್ರ, ಜಾತಿ ಪ್ರಮಾಣ ಪತ್ರ, ಜನ್ಮ ದಿನಾಂಕ ದಾಖಲೆಯ ಕುರಿತು ಎಸ್‌ಎಸ್‌ಎಲ್‌ಸಿ ಅಂಕಪಟ್ಟಿ ಹಾಗೂ ಎಲ್‌ಸಿ, ಬಾರ್‌ಅಸೋಶಿಯೇಶನ್ ಸದಸ್ಯತ್ವ ಪ್ರಮಾಣ ಪತ್ರ, ಅಂತಿಮ ಕಾನೂನು ಪಾಸ ಮಾಡಿದ ಅಂಕಪಟ್ಟಿ ಮುಂತಾದ ಶೈಕ್ಷಣಿಕ ಅರ್ಹಪಡೆದ ದೃಡೀಕರಣ ಪ್ರಮಾಣ ಪತ್ರಗಳೊಂದಿಗೆ ದಿನಾಂಕ 15.9.2006ರ ಒಳಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ಬಿಜಾಪೂರ ಇವರಿಗೆ ಅರ್ಜಿಸಲ್ಲಿಸತಕ್ಕದ್ದು. ಮಾನ್ಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಬಿಜಾಪೂರ ಇವರ ಅಧ್ಯಕ್ಷತೆಯಲ್ಲಿ ಸರ್ಕಾರದಿಂದಾ ರಚಿತವಾಗಿರುವ ಆಯ್ಕೆ ಸಮಿತಿಯು ಅಭ್ಯರ್ಥಿಗಳನ್ನು ಸಂದರ್ಶನದ ಮೂಲಕ ಆಯ್ಕೆ ಮಾಡಲಾಗುವುದು.

ಅರ್ಜಿ ನಮೂನೆ ಮತ್ತು ಇತರೆ ಹೆಚ್ಚಿನ ವಿವರಗಳಿಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳವರ ಕಾರ್ಯಾಲಯ ಆನಂದ ಮಹಲ ಬಿಜಾಪೂರ ಇಲ್ಲಿ ಸಂಪರ್ಕಿಸಬಹುದಾಗಿದೆ.

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ಹಾಗೂ ಸದಸ್ಯ ಕಾರ್ಯದರ್ಶಿ
ಜಿಲ್ಲಾ ಮಟ್ಟದ ಕಾನೂನು ಪದವೀಧರರ ಆಡಳಿತ ನ್ಯಾಯಾದೀಕರ
ತರಬೇತಿ ಆಯ್ಕೆ ಸಮಿತಿ, ಬಿಜಾಪೂರ ಜಿಲ್ಲೆ.

ಪಿ.ಆರ್. 1257

**ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ**

**ನಂ. ಡಿಆರ್ : ಡಿವಿಜಿ : ಸಮಾಪನೆ : ಸಿಆರ್-42 / 02-03, ದಿನಾಂಕ: 08ನೇ ಆಗಸ್ಟ್ 2006**

**ವಿಷಯ:** ಸಮಾಪನೆಯಲ್ಲಿರುವ ಶಕ್ತಿ ವಿವಿದೋದ್ದೇಶ ಸಹಕಾರ ಸಂಘ ನಿ., ದಾವಣಗೆರೆ ಈ ಸಂಘವನ್ನು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲು 72(3) ರನ್ವಯ ಪುನಃಶ್ಚೇತನಗೊಳಿಸಲು ಆದೇಶಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿ ಸಮ ಸಂಖ್ಯೆ ಆದೇಶ ದಿ: 25.7.2006.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪತ್ರ ಸಂ: ಸನಿ31 : ಎಲ್‌ಕ್ಯೂಡಿ : ಶಕ್ತಿವಿ : ಸಿಆರ್-40 : 02-03 ದಿ: 25.7.2006.

3) ಈ ಕಛೇರಿ ಆದೇಶ ಸಂ: ಡಿಆರ್ : ಡಿವಿಜಿ : ಎಲ್‌ಕ್ಯೂಡಿ : ಸಿಆರ್-11 : 06-07 ದಿ: 20.6.2006.

**ಪ್ರಸ್ತಾವನೆ :**

ಈ ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಮಬಂಧಿಸಿದಂತೆ, ವಿಷಯ ಸೂಚಿತ ಸಂಘವು ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿದ್ದ ಕಾರಣ, ಉಲ್ಲೇಖ (1)ರ ಈ ಕಛೇರಿ ಆದೇಶದ ರೀತ್ಯಾ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಉಲ್ಲೇಖ (3)ರ ಈ ಕಛೇರಿ ಆದೇಶ ರೀತ್ಯಾ ಶ್ರೀ ಎ.ಆರ್. ಹನುಮಂತಪ್ಪ, ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯಾಗಿ ಬದಲಾವಣೆ ಮಾಡಲಾಯಿತು. ದಿ: 10.7.2006 ರಿಂದ ಸಂಘದ ಸದಸ್ಯರು ಸಭೆ ಸೇರಿ, ಶ್ರೀ ಡಿ. ತಿಪ್ಪಣ್ಣ ಇವರನ್ನು ಸಭಾಧ್ಯಕ್ಷರನ್ನಾಗಿ ನೇಮಿಸಿ, ಸಭೆಯಲ್ಲಿ ಸಂಘವನ್ನು ಸದಸ್ಯರ ಹಿತದೃಷ್ಠಿಯಿಂದ ಮುಂದುವರೆಸಿಕೊಂಡು ಹೋಗಲು ಪುನಃಶ್ಚೇತನಕ್ಕೆ ಆದೇಶ ನೀಡುವಂತೆ ಉಪ ನಿಬಂಧಕರನ್ನು ಕೋರಲು ಸರ್ವಾನುಮತದಿಂದ ತೀರ್ಮಾನಿಸಿ ಮುಂದಿನ ಐದು ವರ್ಷಗಳ ಕ್ರಿಯಾ ಯೋಜನೆಯನ್ನು ರೂಪಿಸಿಕೊಂಡು ಸಭೆಯಲ್ಲಿ ಮಂಡಿಸಿ, ಯೋಜನೆ ರೀತ್ಯಾ ಕಾರ್ಯಕ್ರಮ ಹಮ್ಮಿಕ್ಕೊಳ್ಳಲು ತೀರ್ಮಾನಿಸಿರುತ್ತಾರೆ. ಅದರಂತೆ ಉಲ್ಲೇಖ (2)ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಪ್ರಸ್ತಾವನೆಯನ್ನು ಶಿಫಾರಸ್ಸುಮಾಡಿ ಸಂಘವನ್ನು ಪುನಃಶ್ಚೇತನಗೊಳಿಸಿ ಆದೇಶಿಸಲು ಕೋರಿರುತ್ತಾರೆ. ಈ ಮೇಲ್ಕಂಡ ಅಂಶಗಳನ್ನು ಪರಿಗಣಿಸಿ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅನುಮತಿ ನೀಡಲು ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲು 72(3) ರನ್ವಯ ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯೂ : 69 : ಸಿಎಲ್‌ಎಂ : 2000 ದಿ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿಕೊಂಡು ಕೆ.ಎಂ. ಆಶಾ, ಕೆ.ಸಿ.ಎಸ್. ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಆದ ನಾನು ಶಕ್ತಿ ವಿವಿದೋದ್ದೇಶ ಸಹಕಾರ ಸಂಘ ನಿ. ದಾವಣಗೆರೆ ಇದು ಉಲ್ಲೇಖ (1)ರ ಆದೇಶವನ್ನು ರದ್ದುಗೊಳಿಸಿ ಪುನಃಶ್ಚೇತನಕ್ಕೆ ಆದೇಶಿಸಿರುತ್ತೇನೆ.

ಸಂಘದ ಪ್ರಥಮ ವಾರ್ಷಿಕ ಮಹಾಸಭೆಯನ್ನು ಸಹಕಾರಿ ಕಾಯ್ದೆ ಮತ್ತು ನಿಯಮಗಳ ಅನುಸಾರ ಜರುಗಿಸಲು ಕಾರ್ಯದರ್ಶಿಯವರಿಗೆ ಸೂಚಿಸಿದೆ, ಹಾಗೂ ಸಂಘದ ನೂತನ ಆಡಳಿತ ಮಂಡಳಿ ರಚನೆ ಮಾಡಲು ಶ್ರೀ ಎ.ಕೆ. ಹನುಮಂತಪ್ಪ, ಸಹಕಾರ ಸಂಘಗಳ ನಿರೀಕ್ಷಕರು, ಸಹಾಯಕ

ನಿಬಂಧಕರ ಕಛೇರಿ, ದಾವಣಗೆರೆ ಇವರನ್ನು ಚುನಾವಣಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಚುನಾವಣಾಧಿಕಾರಿಗಳು ಚುನಾವಣಾ ಪ್ರಕ್ರಿಯೆಗಳನ್ನು ಜರುಗಿಸಿ ಹಾಗೂ ಪ್ರಥಮ ವಾರ್ಷಿಕ ಮಹಾಸಭೆಗೆ ಹಾಜರಾಗಿ, ಈ ಕಛೇರಿಗೆ ವರದಿ ಮಾಡಲು ಸೂಚಿಸಿದೆ.

ಈ ಆದೇಶವನ್ನು ಇಂದು ದಿನಾಂಕ: 07.08.2006 ರಂದು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 1258

## ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ

### ನಂ. ಡಿಆರ್‌ಡಿ : ಎಲ್‌ಕ್ಯೂಡಿ : ಸಿಆರ್- / 06-07, ದಿನಾಂಕ: 09ನೇ ಆಗಸ್ಟ್ 2006

**ವಿಷಯ:** ಸ್ಥಗಿತಗೊಂಡಿರುವ ಫ್ರೆಂಡ್ಸ್ ಕ್ರೆಡಿಟ್ ಸಹಕಾರ ಸಂಘ ನಿ., ಜೆ.ಸಿ.ಆರ್. ಬಡಾವಣೆ ಚಿತ್ರದುರ್ಗ ನಗರ ಇದನ್ನು 1959ನೇ ಕ.ಸ.ಕಾ. ಕಲಂ 72 ರನ್ವಯ ಸಮಾಪನೆಗೊಳಿಸುವ ವಿಚಾರ.

**ಉಲ್ಲೇಖ:** ಅಧ್ಯಕ್ಷರು ಹಾಗೂ ನಿರ್ದೇಶಕರು, ಪೆಂಡ್ಸ್ ಕ್ರೆಡಿಟ್ ಸಹಕಾರ ಸಂಘ ನಿ., ಜೆ.ಸಿ.ಆರ್. ಬಡಾವಣೆ ಚಿತ್ರದುರ್ಗ ನಗರ ಇವರ ಪತ್ರ ಸಂಖ್ಯೆ: ದಿನಾಂಕ: 4.08.2006.

**ಪ್ರಸ್ತಾವನೆ :**

ಫ್ರೆಂಡ್ಸ್ ಕ್ರೆಡಿಟ್ ಸಹಕಾರ ಸಂಘ ನಿ. ಅಧ್ಯಕ್ಷರು ಮತ್ತು ನಿರ್ದೇಶಕರು ಇವರು ಉಲ್ಲೇಖ (1) ರಲ್ಲಿ ಸಲ್ಲಿಸಿರುವ ಮನವಿಯ ಪ್ರಕಾರ ಸಂಘವು ಎಆರ್ / 30 / 691 / ಆರ್.ಜಿ.ಎನ್ / 19104 / 96-97 ದಿನಾಂಕ: 08.10.1996 ರ ಪ್ರಕಾರ ನೊಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲವಾಗಿರುವುದಲ್ಲದೆ ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಹೊಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲವಾದ ಕಾರಣ ಸಂಘವನ್ನು ಪುನಃಶ್ಚೇತನಗೊಳಿಸುವ ಹಂತವನ್ನು ಮೀರಿರುವುದರ ಪ್ರಯುಕ್ತ ಸಂಘವನ್ನು ಇದೇ ರೀತಿ ಮುಂದುವರೆಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡು ಬಂದಿರುವ ಪ್ರಯುಕ್ತ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959 ನೇ ಕರ್ನಾಟಕ ಸಹಕಾರ ಸಂಘಗಲ ಕಾಯ್ದೆ ಕಲಂ 72 (2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ : 69 ಸಿಎಲ್‌ಎಂ : 2001 : ದಿನಾಂಕ: 21.11.2001 ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಚಿತ್ರದುರ್ಗ ಜಿಲ್ಲಾ ಸಹಕಾರ ಸಂಘಗಳ ನಿಬಂಧಕರು ಟಿ.ಓ. ಸುನಂದಮ್ಮ ಆದ ನಾನು ಫ್ರೆಂಡ್ಸ್ ಕ್ರೆಡಿಟ್ ಸಹಕಾರ ಸಂಘ ನಿ. ಜೆ.ಜಿ.ಆರ್. ಬಡಾವಣೆ ಚಿತ್ರದುರ್ಗ ನಗರ, ಇದನ್ನು ಸಮಾಪನೆಗೊಳಿಸಿ 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿಗಳು ಚಿತ್ರದುರ್ಗ ತಾ. ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 73(1) ಮತ್ತು 74 ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವ ಹಸ್ತ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ; 09.08.2006 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್. 1274

## ಕೃಷಿ ಮಾರಾಟ ಇಲಾಖೆ

## ಕೃಷಿ ಮಾರಾಟ ಆಯುಕ್ತರ ಕಛೇರಿ, ನಂ. 16, 11ನೇ ರಾಜಭವನ ರಸ್ತೆ, ಪಿ.ಬಿ. ನಂ. 5309, ಬೆಂಗಳೂರು

### ಅಧಿಸೂಚನೆ

### ಸಂಖ್ಯೆ: ಕೃಮಾಇ / 182 / ಪೋಟನಿ / 2004, ದಿನಾಂಕ: 11ನೇ ಆಗಸ್ಟ್ 2006

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 6ರ ಉಪಪ್ರಕರಣ (2)ರ ಮೇರೆಗೆ ಹೊರಡಿಸಲಾಗಿದ್ದ ಅಧಿಸೂಚನೆ ಸಂಖ್ಯೆ: ಎಂಡಿ : ಆರ್‌ಜಿಎನ್ 2 : ಇಎಸ್‌ಟಿ : ಸಿಆರ್ : 138 : ಆರ್ & ಇ : 75-76, ದಿ: 03.12.1975 ರಲ್ಲಿ (ಇನ್ನು ಮುಂದೆ ಸದರಿ ಅಧಿಸೂಚನೆ ಎಂದು ಉಲ್ಲೇಖಿಸಲಾಗಿದೆ) ಕರ್ನಾಟಕ ದಲ್ಲಿನ ಕೃಷಿ ಮಾರಾಟ ನಿರ್ದೇಶಕರು, ಬೆಂಗಳೂರು ಇವರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಶಿವಮೊಗ್ಗ ಸಮಿತಿ ವ್ಯಾಪ್ತಿಯ ತೀರ್ಥಹಳ್ಳಿ ಪುರಸಭೆ ವ್ಯಾಪ್ತಿಯ ಪ್ರದೇಶವನ್ನು "ಉಪಮಾರುಕಟ್ಟೆ" ಎಂದು ಮತ್ತು ಸದರಿ ಅನುಸೂಚಿಯಲ್ಲಿ ನಿರ್ದಿಷ್ಠ ಪಡಿಸಿದ ಸ್ಥಳವನ್ನು "ಉಪಮಾರುಕಟ್ಟೆ ಪ್ರಾಂಗಣ" ಎಂದು ಘೋಷಿಸಿದ್ದರು.

ಶಿವಮೊಗ್ಗ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟಿರುವ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ತೀರ್ಥಹಳ್ಳಿ ತಾಲ್ಲೂಕಿನ ಕಸಬಾ ಹೋಬಳಿ ಗ್ರಾಮದ ಸರ್ವೆ ನಂ. 1:1, 1:2, 2, 4:2, 4:4, 4:5, 4;7, 4:8, 4:9, 4:10 ರಲ್ಲಿ ಕ್ರಮವಾಗಿ ಒಟ್ಟು 5 ಎಕರೆ 5 ಗುಂಟೆ ವಿಸ್ತೀರ್ಣದ ಜಮೀನನ್ನು ಸಮಿತಿಯು ಸ್ವಾಧೀನಪಡಿಸಿಕೊಂಡು ಅಭಿವೃದ್ಧಿಪಡಿಸಿರುವ ಜಮೀನಿನ ಪ್ರದೇಶವನ್ನು ಸದರಿ ಅಧಿಸೂಚನೆಯಲ್ಲಿ ಘೋಷಿಸಲಾದ ಉಪಮಾರುಕಟ್ಟೆ ಪ್ರಾಂಗಣದ ಬದಲಾಗಿ ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಠಪಡಿಸಿದಂತೆ ಸೀಮಾಬದ್ಧಗೊಳಿಸಿ ಘೋಷಿಸಲಾಗಿದೆ.

ಮತ್ತು ಅದಕಾರಣ, ಸದರಿ ಅಧಿಸೂಚನೆಯಲ್ಲಿ ಘೋಷಿಸಲ್ಪಟ್ಟಿರುವ ಉಪಮಾರುಕಟ್ಟೆ ಪ್ರಾಂಗಣದ ಬದಲು ತೀರ್ಥಹಳ್ಳಿ ಪುರಸಭೆ ವ್ಯಾಪ್ತಿಯ ಸರ್ವೆ ನಂ. 1:1, 1:2, 2, 4:2, 4:4, 4:5, 4;7, 4:8, 4:9, 4:10 ರಲ್ಲಿ ಕ್ರಮವಾಗಿ ಒಟ್ಟು 5 ಎಕರೆ 5 ಗುಂಟೆ ವಿಸ್ತೀರ್ಣದ ಸ್ಥಳವನ್ನು "ಉಪಮಾರುಕಟ್ಟೆ" ಎಂದು ಘೋಷಿಸಲು ಅಧಿಸೂಚನೆ ಸಂಖ್ಯೆ: ಕೃಮಾಇ : 182 : ನಿಯವಿ : 2004, ದಿನಾಂಕ: 08.02.2006ರ ಮೂಲಕ ಕರ್ನಾಟಕ ರಾಜ್ಯ ಪತ್ರ ಭಾಗ-3, ದಿನಾಂಕ: 08.06.2006ರಲ್ಲಿ ಉದ್ದೇಶವನ್ನು ಪ್ರಕಟಿಸಲಾಗಿದೆ ಮತ್ತು ಸದರಿ ಪ್ರಸ್ತಾವಕೆ ಸಂಬಂಧಿಸಿದಂತೆ ಆಕ್ಷೇಪಣೆ / ಸಲಹೆಗಳನ್ನು ಆಹ್ವಾನಿಸಲಾಗಿತ್ತು. ಸದರಿ ಪ್ರಸ್ತಾವಕ್ಕೆ ಸಂಬಂಧಿಸಿದಂತೆ ಯಾವುದೇ ಆಕ್ಷೇಪಣೆ / ಸಲಹೆಗಳು ಬಂದಿರುವುದಿಲ್ಲ.

ಆದುದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 3ನ್ನು ಓದಿ ಪ್ರಕರಣ 6(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿ ಕೃಷಿ ಮಾರಾಟ ನಿರ್ದೇಶಕನಾಗಿರುವ ಜಿ.ಎಸ್. ನಾರಾಯಣಸ್ವಾಮಿ ಆದ ನಾನು, ಶಿವಮೊಗ್ಗ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಸರ್ಕಾರದ ಅಧಿಸೂಚನೆ ಮೂಲಕ ಅಧಿಸೂಚಿಸಲ್ಪಟ್ಟಿರುವ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಸದರಿ ಅಧಿಸೂಚನೆಯಲ್ಲಿ ಉಪಮಾರುಕಟ್ಟೆ ಪ್ರಾಂಗಣ ಘೋಷಣೆಗೆ ಸಂಬಂದಿಸಿದ್ದರ ಮಟ್ಟಿಗೆ ನಿರ್ದಿಷ್ಟಪಡಿಸಿರುವ ಸ್ಥಳವನ್ನು ರದ್ದುಪಡಿಸಿ ತೀರ್ಥಹಳ್ಳಿ ಪುರಸಭೆ ವ್ಯಾಪ್ತಿಯ ಸರ್ವೆ ನಂ. 1:1, 1:2, 2, 4:2, 4:4, 4:5, 4;7, 4:8, 4:9, 4:10 ರಲ್ಲಿ ಕ್ರಮವಾಗಿ ಒಟ್ಟು 5 ಎಕರೆ 5 ಗುಂಟೆ ಪ್ರದೇಶವನ್ನು ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ ಸೀಮಾಬದ್ಧಗೊಳಿಸಿ "ಉಪಮಾರುಕಟ್ಟೆ" ಎಂದು ಘೋಷಿಸಿದ್ದೇನೆ.

**ಅನುಸೂಚಿ**

ತೀರ್ಥಹಳ್ಳಿ ಪುರಸಭೆ ವ್ಯಾಪ್ತಿಯ ಸರ್ವೆ ನಂ. 1:1, 1:2, 2, 4:2, 4:4, 4:5, 4;7, 4:8, 4:9, 4:10 ರಲ್ಲಿ ಕ್ರಮವಾಗಿ ಒಟ್ಟು 5 ಎಕರೆ 5 ಗುಂಟೆ ಜಮೀನಿನ ಈ ಕೆಳಗಿನ ಸೀಮಾಬದ್ಧ ಸ್ಥಳ :-

ಪೂರ್ವಕ್ಕೆ : ಹೆಚ್.ಎಂ. ರಸ್ತೆ
ಪಶ್ಚಿಮಕ್ಕೆ : ಖಾಸಗಿ ಜಮೀನು ಸರ್ವೆ ನಂ. 9
ಉತ್ತರಕ್ಕೆ : ತೀರ್ಥಹಳ್ಳಿ ಪಟ್ಟಣ ಬಡಾವಣೆ
ದಕ್ಷಿಣಕ್ಕೆ : ಸರ್ವೆ ನಂ. 4:6ಎ, 4:6ಬಿ, 4:6ಬಿ2, 4:6ಬಿ3, 4:11, 4:12 ಹಾಗೂ 4:18ರಲ್ಲಿನ ಜಮೀನು.

**ಜಿ.ಎಸ್. ನಾರಾಯಣಸ್ವಾಮಿ**
ನಿರ್ದೇಶಕರು.

ಪಿ.ಆರ್. 1260

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ**

**ಪ್ರ.ಸಂ. ನಕಾಅದಾ : ಕಾನಪ : ಡಿವಿಜಿ : ಸಿಆರ್-73 / 06, ದಿನಾಂಕ: ಜುಲೈ 2006**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

ಶ್ರೀಮತಿ ಸಾಜೀದಾಬಾನು ಕೋಂ
ಲೇಟ್ ಜಬೀವುಲ್ಲಾ ಅಲಿಯಾಸ್ ಸೈಯದ್
ಜಬೀವುಲ್ಲಾ ಐರಣಿ, 24 ವರ್ಷ ಹಾಗೂ
ಇತರೆ ಮೂರು ಜನರು,
ವಾ: ಉಚ್ಚಂಗಿದುರ್ಗ,
ಹರಪನಹಳ್ಳಿ ತಾಲ್ಲೂಕು,
ದಾವಣಗೆರೆ ಜಿಲ್ಲೆ.

1) ಅಬ್ದುಲ್ ಮಜೀದ್ ಬಿನ್ ಅಬ್ದುಲ್ ಸಲಾಮ್,
25 ವರ್ಷ ಮಹೇಂದ್ರ ವಾನ್ ಮಾಲೀಕರು,
ನಂ. ಕೆಎ-17-ಎ-2371, ಟಿಪ್ಪುನಗರ,
ಹರಿಹರ, ದಾವಣಗೆರೆ ಡಿಸ್ಟ್ರಿಕ್ಟ್,
2) ದಿ. ಮ್ಯಾನೇಜರ್,
ನ್ಯೂ ಇಂಡಿಯಾ ಅಸ್ಯೂರೆನ್ಸ್ ಕಂಪನಿ ಲಿ.,
ವಾಲಿ ಕಾಂಪ್ಲೆಕ್ಸ್, ಶಿವಮೊಗ್ಗ ರೋಡ್,
ಹರಿಹರ

**ಪ್ರಕಟಣೆ**

ಶ್ರೀ : ಶ್ರೀಮತಿ ಸಾಜೀದಾಬಾನು ಕೋಂ ಲೇಟ್ ಜಬೀವುಲ್ಲಾ ಅಲಿಯಾಸ್ ಸೈಯದ್ ಜಬೀವುಲ್ಲಾ ಐರಣಿ, ಮಸುಂದಾ ಮಗಳು ಲೇಟ್ ಜಬೀವುಲ್ಲಾ ಅಲಿಯಾಸ್ ಸೈಯದ್ ಜಬೀವುಲ್ಲಾ ಐರಣಿ, ಫರೂಜ್ ಅಹ್ಮದ್ ಬಿನ್ ಲೇಟ್ ಜಬೀವುಲ್ಲಾ ಅಲಿಯಾಸ್ ಸೈಯದ್ ಜಬೀವುಲ್ಲಾ ಐರಣಿ ಮಹಮ್ಮದ್‌ದಾ ಮಗಳು ಲೇಟ್ ಜಬೀವುಲ್ಲಾ ಅಲಿಯಾಸ್ ಸೈಯದ್ ಜಬೀವುಲ್ಲಾ ಐರಣಿ ಇವರ ಹೆಂಡತಿ ಮತ್ತು ಮಕ್ಕಳು ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಶ್ರೀ ಜಬೀವುಲ್ಲಾ ಅಲಿಯಾಸ್ ಸೈಯದ್ ಜಬೀವುಲ್ಲಾ ಐರಣಿ ರವರು ಒಂದನೆ ಪ್ರತಿವಾದಿಗಳಾದ ಅಬ್ದುಲ್ ಮಜೀದ್ ಬಿನ್ ಅಬ್ದುಲ್ ಸಲಾಮ್ ಇವರ ಮಹೇಂದ್ರ ವ್ಯಾನ್ ರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಲ್ಯಾಣರಾವ್ ಬಿ. ಗೌಡೆ**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್. 1261

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ**

**ಪ್ರ.ಸಂ. ನಕಾಅದಾ : ಕಾನಪ : ಡಿವಿಜಿ : ಸಿಆರ್-74 / 06, ದಿನಾಂಕ: ಜುಲೈ 2006**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

1) ಶ್ರೀಮತಿ ಕೆ.ಆರ್. ಪಾರ್ವತಮ್ಮ
ಕೋಂ ಲೇ: H.L. ಪ್ರಕಾಶ್
2) ನಿಕಿಲ್ ಬಿನ್ ಲೇ: H.L. ಪ್ರಕಾಶ್
ಇಬ್ಬರ ವಾಸ: ಕ್ಯಾಸೀನಹಳ್ಳಿ,
ಜಗಳೂರು ತಾಲ್ಲೂಕು,
ದಾವಣಗೆರೆ ಜಿಲ್ಲೆ.

1) ದಿ. ವೇರ್ ಮನ್, ಬೆಸ್ಕಾಂ, ಕಾವೇರಿ ಭವನ,
ಬೆಂಗಳೂರು.
2) ದಿ. ಎಕ್ಸಿಕ್ಯೂಟೀವ್ ಇಂಜಿನಿಯರ್
ಬೆಸ್ಕಾಂ, ಹದಡಿ ರೋಡ್ ದಾವಣಗೆರೆ ಡಿವಿಜನ್
ದಾವಣಗೆರೆ
3) ದಿ. ಅಸಿಸ್ಟೆಂಟ್ ಎಕ್ಸಿಕ್ಯೂಟೀವ್ ಇಂಜಿನಿಯರ್,
ಬೇಸ್ಕಾಂ, ಜಗಳೂರು.

**ಪ್ರಕಟಣೆ**

ಶ್ರೀ : ಶ್ರೀಮತಿ 1) ಕೆ.ಆರ್. ಪಾರ್ವತಮ್ಮ 2) ನಿಕಿಲ್ ಇವರು ಮೃತ ಹೆಚ್.ಎಲ್. ಪ್ರಕಾಶ್ ಇವರ ಹೆಂಡತಿ ಮತ್ತು ಮಗ ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ H.L. ಪ್ರಕಾಶ್ ರವರು ಒಂದನೆ ಪ್ರತಿವಾದಿಗಳಾದ ದಿ. ಛೇರ್‌ಮನ್ ಇವರ ಬೆಸ್ಕಾಂ ರಲ್ಲಿ ಲೈನ್‌ಮೆನ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಲ್ಯಾಣರಾವ್ ಬಿ. ಗೌಡೆ**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್. 1262

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ**

**ಪ್ರ.ಸಂ. ನಕಾಅದಾ : ಕಾನಪ : ಡಿವಿಜಿ : ಸಿಆರ್-75 / 06, ದಿನಾಂಕ: 16ನೇ ಆಗಸ್ಟ್ 2006**

**ಅರ್ಜಿದಾರರು**

1) ಶ್ರೀಮತಿ ಗಂಗಮ್ಮ
ಕೋಂ.ಪುರದ ಸಿದ್ದಪ್ಪ
2) ಪುರಸ ಸಿದ್ದಪ್ಪ ಬಿನ್ ಅಡಿವೆಪ್ಪ
ವಾಸ: ಎ.ಕೆ. ಕಾಲೋನಿ
ಹರಪನಹಳ್ಳಿ ರೋಡ್,
ಹರಿಹರ.

**ವಿರುದ್ಧ**

**ಪ್ರತಿವಾದಿಗಳು**

1) ಪುಮ್ಮಪ್ಪ ಲಮಾಣಿ ಬಿನ್ ಮನಪ್ಪ ಲಮಾಣಿ
ಟ್ರ್ಯಾಕ್ಟರ್ ಮಾಲೀಕರು, ನಂ. ಕೆಎ 27/
8437-38, ವಾಸ: ಹನುಮಪುರ ಗ್ರಾಮ,
ರಾಣೆಬೆನ್ನೂರು ತಾಲ್ಲೂಕು, ಹಾವೇರಿ ಜಿಲ್ಲೆ.
2) ದಿ. ಬ್ರಾಂಚ್ ಮ್ಯಾನೇಜರ್
ದಿ. ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್
ಕಂ.ಲಿ., ಕೆ.ಎಸ್.ಆರ್.ಟಿ.ಸಿ. ಬಸ್ ಸ್ಟ್ಯಾಂಡ್
ಎದುರು, ಹಾವೇರಿ.

**ಪ್ರಕಟಣೆ**

ಶ್ರೀ : ಶ್ರೀಮತಿ 1) ಗಂಗಮ್ಮ 2) ಪುರದ ಸಿದ್ದಪ್ಪ ಇವರು ಮೃತ ಗುರುಮೂರ್ತಿ ಇವರ ತಾಯಿ ಮತ್ತು ಮಗ ತಂದೆ ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಗುರುಮೂರ್ತಿ ರವರು ಒಂದನೆ ಪ್ರತಿವಾದಿಗಳಾದ ಪುಮ್ಮಪ್ಪ ಲಮಾಣಿ ಇವರ ಟ್ರ್ಯಾಕ್ಟರ್ ರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಲ್ಯಾಣರಾವ್ ಬಿ. ಗೌಡೆ**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್. 1263

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ**

**ಪ್ರ.ಸಂ. ನಕಾಅದಾ : ಕಾನಪ : ಡಿವಿಜಿ : ಸಿಆರ್-76 / 06, ದಿನಾಂಕ: 16ನೇ ಆಗಸ್ಟ್ 2006**

**ಅರ್ಜಿದಾರರು**

1) ಶ್ರೀಮತಿ ಹಾಲಮ್ಮ ಕೋಂ ಚನ್ನಬಸಯ್ಯ
2) ಕೊಟ್ರಯ್ಯ ಬಿನ್ ಚನ್ನಬಸಯ್ಯ
ಇಬ್ಬರ ವಾಸ: ಮಹಾದೇವಪುರ
ದಾವಣಗೆರೆ ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು**

1) ಜಿ. ಉಮಾಪತಿ ಬಿನ್ ಲೇ: ಗೋವಿಂದ ರಾಜ್
ಲಾರಿ ಮಾಲೀಕರು, ನಂ. ಕೆಎ 17/ಎ. 1967
ವಾಸ: ನಂ 22, ಲೇಬರ್ ಕಾಲೋನಿ,
ನಿಟ್ಟುವಳ್ಳಿ ರೋಡ್, ದಾವಣಗೆರೆ
2) ದಿ. ಮ್ಯಾನೇಜರ್
ದಿ. ನ್ಯೂ ಇಂಡಿಯಾ ಇನ್ಶೂರೆನ್ಸ್ ಕಂ.ಲಿ.,
ಎಂ.ಎಂ. ಆರ್ಕೊಡ್, ವಿದ್ಯಾರ್ಥಿ ಭವನ ಹತ್ತಿರ,
ದಾವಣಗೆರೆ.

**ಪ್ರಕಟಣೆ**

ಶ್ರೀ : ಶ್ರೀಮತಿ 1) ಶ್ರೀಮತಿ ಹಾಲಮ್ಮ 2) ಕೊಟ್ರಯ್ಯ ಇವರು ಮೃತ ಸಿದ್ದೇಶ @ ಸಿದ್ದರಾಮೇಶ್ ಇವರ ತಾಯಿ ಮತ್ತು ಅಣ್ಣ ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸಿದ್ದೇಶ @ ಸಿದ್ದರಾಮೇಶ್ ರವರು ಒಂದನೆ ಪ್ರತಿವಾದಿಗಳಾದ ಜಿ. ಉಮಾಪತಿ ಇವರ ಲಾರಿ ರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ

ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಲ್ಯಾಣರಾವ್ ಬಿ. ಗೌಡೆ**

ಪಿ.ಆರ್. 1264

ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ವಿಭಾಗ, ದಾವಣಗೆರೆ.

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ**

**ಪ್ರ.ಸಂ. ನಕಾಆದಾ : ಕಾನಪ : ಡಿವಿಜಿ : ಸಿಆರ್-77 / 06, ದಿನಾಂಕ: ಜುಲೈ 2006**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1) ಶ್ರೀಮತಿ ಕಲಾವತಿ ಕೋಂ
ಲೇ: ಆರ್. ಮಂಜು
2) ಕವನ ಬಿನ್ ಲೇ: ಆರ್. ಮಂಜು
3) ಈರಮ್ಮ ಕೋಂ ರಮೇಶ್

1) ಜಿ. ಉಮಾಪತಿ ಬಿನ್ ಲೇ: ಗೋವಿಂದ ರಾಜ್
ನಂ 22, ಲೇಬರ್ ಕಾಲೋನಿ,
ನಿಟ್ಟುವಳ್ಳಿ ರೋಡ್, ದಾವಣಗೆರೆ
2) ದಿ. ಮ್ಯಾನೇಜರ್
ದಿ. ನ್ಯೂ ಇಂಡಿಯಾ ಇನ್ಶೂರೆನ್ಸ್ ಕಂ.ಲಿ.,
ಎಂ.ಎಂ. ಆರ್ಕೆಡ್, ವಿದ್ಯಾರ್ಥಿ ಭವನ ಹತ್ತಿರ,
ದಾವಣಗೆರೆ.

**ಪ್ರಕಟಣೆ**

ಶ್ರೀ : ಶ್ರೀಮತಿ 1) ಕಲಾವತಿ 2) ಕವನ 3) ಈರಮ್ಮ ಇವರು ಮೃತ ಆರ್. ಮಂಜು ಇವರ ಹೆಂಡತಿ, ಮಗಳು ಮತ್ತು ತಾಯಿ ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಆರ್. ಮಂಜು ರವರು ಒಂದನೆ ಪ್ರತಿವಾದಿಗಳಾದ ಜಿ. ಉಮಾಪತಿ ಇವರ ಲಾರಿ ರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಲ್ಯಾಣರಾವ್ ಬಿ. ಗೌಡೆ**

ಪಿ.ಆರ್. 1265

ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ವಿಭಾಗ, ದಾವಣಗೆರೆ.

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ**

**ಪ್ರ.ಸಂ. ನಕಾಆದಾ : ಕಾನಪ : ಡಿವಿಜಿ : ಸಿಆರ್-78 / 2006, ದಿನಾಂಕ: 14ನೇ ಆಗಸ್ಟ್ 2006**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1) ಶ್ರೀ ಕೆ. ಹನುಮಂತಪ್ಪ
2) ಶ್ರೀಮತಿ ಪುಟ್ಟಮ್ಮ ಕೋಂ
ಕೆ. ಹನುಮಂತಪ್ಪ
ವಾಸ: ಬುಳ್ಳಪುರ ಗ್ರಾಮ
ಕೊಂಡಜ್ಜಿ, ಹರಿಹರ (ತಾ).

1) ಕೆ. ಜಯಪ್ಪ S/O ಸಿದ್ದಪ್ಪ
ಕಣಗಿನಹಳ್ಳಿ ಗ್ರಾಮ, ಹೊನ್ನಾಳಿ (ತಾ),
ದಾವಣಗೆರೆ (ಡಿ.)
2) ನ್ಯಾಷನಲ್ ಇನ್ಶೂರೆನ್ಸ್ ಕಂಪನಿ ಲಿ.,
ಚಾಮರಾಜಪೇಟೆ, ಪೇಟೆ,
ದಾವಣಗೆರೆ.

**ಪ್ರಕಟಣೆ**

ಶ್ರೀ 1) ಕೆ. ಹನುಮಂತಪ್ಪ ತಂದೆ ಮೃತ ಮಹೇಶ, 2) ಶ್ರೀಮತಿ ಪುಟ್ಟಮ್ಮ ತಾಯಿ ಮೃತ ಮಹೇಶ ಇವರ ತಾಯಿ ಮತ್ತು ತಂದೆ ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮಹೇಶ್ ರವರು ಒಂದನೆ ಪ್ರತಿವಾದಿಗಳಾದ ಕೆ. ಜಯಪ್ಪ S/O ಸಿದ್ದಪ್ಪ ಇವರ ಟ್ರ್ಯಾಕ್ಟರ್ ಟ್ರೇಲರ್ ರಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಲ್ಯಾಣರಾವ್ ಬಿ. ಗೌಡೆ**

ಪಿ.ಆರ್. 1266

ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ವಿಭಾಗ, ದಾವಣಗೆರೆ.

**(v) The rules, regulations, instructions, manuals and records, held by it or under its control or used by its employees for discharging its functions ;**

**Following rules, regulations, instructions, manuals are used for discharging the functions:**

(1) Karnataka Police manual
(2) Karnataka Police Act
(3) Criminal procedure code
(4) Indian Penal Code
(5) Evidence Act. And other minor acts
(6) Local laws
(7) K.C.S.Rs
(8) K.F.C.
(9) M.C.E
(10) Office procedure
(11) Other rules, regulations as per the requirements
(12) K.C.S. (C.C. & A) Rules
(13) K.S.P. (D.P) Rules
(14) K.S.P.S (Recruitment) Ruls.

**(vi) a statement of the categories of documents that are held by it or under its control**

**Following records are held by the Department :**

(1) Recruitment of police constables.
(2) Records of cases registered in the Police Stations.
(3) Routine Office records.

**(vii) the particulars of any arrangement that exists for consultation with, or representation by, the members of the public in relation to the formulation of its policy or administration thereof;**

Supdt. of Police nominates the members of the public for rendering their assistance to assist the police in security of property, preservation of public order etc. Supdt. of Police also constitutes mohalla committee, peace committee, neighbourhood watch committees, involving members of the public.

**(viii) a statement of the boards, councils, committees and other bodies consisting of two or more persons constituted as its part or for the purpose of its advise, and as to whether meetings of those boards, councils, committees and other bodies are open to the public, or the minutes of such meetings are accessible for public;**

The decisions and advise since taken by the Departmental Officers no public involvement is entertained. However at the time of communal clashes and other sensitive situations members of the public were invited for holding peace committee for bringing normalcy in the affected areas.

**(ix) a directory of its officers and employees :**

**Sriyuths :**

| SL NO | NAME OF THE OFFICER | DESIGNATION |
|---|---|---|
| 01 | R. HITHENDRA IPS, | Supdt. of Police |
| 02 | V.B. KITTALI, | Addl. Supdt. of Police |
| 03 | YANKAPPA | DY.S.P. RAICHUR |
| 04 | U.M. DHANAREDDY. | DY. S.P. LINGASUGUR |
| 05 | RAVINARAYANA, | DY.S.P SINDHANOOR |
| 06 | Y.H. KHAN | DY.S.P D. A. R. |
| 07 | M. PASHA | C.P.I. RAICHUR EAST |
| 08 | SHANTKUMAR | C.P.I. RAICHUR WEST |
| 09 | MANJUNATH CHOUDARY. | C.P.I RAICHUR RURAL |
| 10 | YEGANAGOUDA | C.P.I. YERGERA |
| 11 | R.U. YELIGARA | C.P.I. LINGASUGUR |
| 12 | S.B. TUMBAGI, | C.P.I MASKI |
| 13 | S.Y. HUNSIKATTI | C.P.I DEODURGA |
| 14 | S.B. PATIL | C.P.I. SINDHANOOR |
| 15 | M.V. SURYAVAMSHI | C.P.I MANVI |

| SL NO | NAME OF THE OFFICER | DESIGNATION |
|---|---|---|
| 16 | T.G. RAYKAR | P.I. DCIB |
| 17 | MUTTANNA | P.I. WIRELESS |
| 18 | T. MANJUNATHA | PSI SADARBAZAR (L & O) |
| 19 | SATYANARAYANA | PSI SADARBAZAR (CRIME) |
| 20 | SURESH H. TALWAR | PSI NETAJI NAGAR (L&O) |
| 21 | ABDUL RAOOF | PSI NETAJINAGAR (C) |
| 22 | PAMPANAGOUDA | PSI MARKETYARD (L & O) |
| 23 | H.S. MURALI | PSI TRAFFIC (L&O) |
| 24 | ABDUL RASHEED | PSI TRAFFIC (C) |
| 25 | PRAVEENBABU | PSI R. WEST (L&O) |
| 26 | CHANNAPPA | PSI R. WEST (C) |
| 27 | R. GOPAL | PSI RAICHUR RURAL |
| 28 | PULLAYYA | PSI YERGERA |
| 29 | CHANDAPATIL | PSI S. NAGAR |
| 30 | SHIVALINGAPPA | PSI IDAPANOOR |
| 31 | NARASINGAPPA | PSI YAPALDINNI |
| 32 | RAJKUMAR VAJENTRI | PSI LINGASUGUR (L&O) |
| 33 | SUBHASCHANDRA | PSI LINGASUGUR (C) |
| 34 | DOWLAT N. KURI | PSI HUTTI |
| 35 | VEERESH DODDAMANI | PSI MUDGAL |
| 36 | MRUTHUNJAYA | PSI MASKI |
| 37 | K. BASAVARAJA | PSI DEODURGA |
| 38 | MOTILAL R. LAMANI | PSI JALHALLI |
| 39 | CHANNAYYA | PSI GABBUR |
| 40 | SHIVANNAGOUDA PATIL | PSI SINDHANOOR (T) (L&O) |
| 41 | HULIGEAPPA | PSI SINDHANOOR (C) TOWN |
| 42 | AYYANAREDDY | PSI SINDHANOOR RURAL |
| 43 | T. H. KARIKAL | PSI TURVIHAL |
| 44 | VINODMUKTEDAR | PSI BALGANOOR |
| 45 | MUSTAQ AHMED | PSI MANVI (L&O) |
| 46 | SANTHOSHAPPA | PSI MANVI (C) |
| 47 | SHIVAMURTHY | PSI SIRWAR |
| 48 | RAMANNA | PSI KOWTAL |
| 49 | TIPPANNA | PSI DCIB RAICHUR |
| 50 | SIDDAPPA | PSI DCIB RAICHUR |
| 51 | ANJENAYYA | PSI DCRB RAICHUR |
| 52 | CHANDARAYYA | RSI DAR RAICHUR |
| 53 | SIDDAYYA | RSI DAR RAICHUR |
| 54 | SHIVALINGAPPA PATTAN | RSI DAR RAICHUR |
| 55 | PRAKASH | RSI DAR RAICHUR |
| 56 | PUNDLIKA | RSI DAR RAICHUR |
| 57 | BHOPAL | RSI DAR RAICHUR |

**(x) the monthly remuneration received by each of its officers and employees, including the system of compensation as provided in its regulations :**

| | | |
|---|---|---|
| 1) | SPs | 10000-15000- Pay as applicable |
| 2) | ADDL. SPs | 9580 - 14200 - Pay as applicable |
| 3) | DSPs | 7400-13120 - Pay as applicable |
| 4) | PIs | 5575-10620 - Pay as applicable |
| 5) | PSIs | 5200 - 9580 - Pay as applicable |
| 6) | ASIs | 3850 - 7050 - Pay as applicable |

| | | |
|---|---|---|
| 7) | HCs | 3300 - 6300 - Pay as applicable |
| 8) | PCs | 3000-5450- Pay as applicable |
| 9) | AAO | 6000-11200 - Pay as applicable |
| 10) | S.S | 5200-9580 - Pay as applicable |
| 11) | FDA | 3850 - 7050 - Pay as applicable |
| 12) | SDA | 3000-5450 - Pay as applicable |
| 13) | Dalayath | 2500-3850 - Pay as applicable |

Pensionery Benefits etc. are allowed as per the Rules applicable from time to time.

(xi) the budget allocated to each of its agency, indicating the particulars of all plans, proposed expenditures and reports on disbursements made :

| Sl. No. | Details | Bud. Provision |
|---|---|---|
| 1. | Salary of officers and men | 141989087.00 |
| 2. | Non-Salary (Contingency) | 23802050.00 |

The unit officers will incur expenditure as per the powers vested with them

**(xii) the manner of execution of subsidy programmes, including the amounts allocated and the details of beneficiaries of such programmes,**

**Not applicable**

**(xiii) particulars of recipients of concessions, permits or authorizations granted by it;**

**-NIL-**

**(xiv) details in respect of the information, available to or held by it, reduced in an electronic form ;**

Crime, Criminal Information System, Crime Statistics are available with all Police Station, District Police Office..

**(xv) the particulars of facilities available to citizens for obtaining information, including the working hours of a library or reading room, if maintained for public use;**

General public can obtain information from the following unit officers.

| Sl. No | Unit | competent authority | appellate authority |
|---|---|---|---|
| Office of the supdt. of Police and other police stations/ Units of entire district | District Police office,<br>Police stations.<br>Police Circles<br>Police sub-divisions<br>Police out post | Supdt. of Police.<br>Raichur | Inspector General of Police. NER, Gulbarga. |

**(xvi) the names, designations and other particulars of the Public Information Officers :**

1) S.P. office

1. Supdt. of Police of the district.
2. Assit. Administrative Officer, S.P. Office Raichur (APIO)

**NOTE :- District Special Branch is exempted from this Act U/S 24 (A)**

**(xvii) Such other information as may be prescribed :**

The other information of the Police Department is as under :

**Sanctioned Strength of Executive Staff :**

| Sl. | Name of the Post | Civil | Women | Armed | KSRP | Wireless | Total |
|---|---|---|---|---|---|---|---|
| 1. | S.P. | 1 | - | - | - | - | 1 |
| 2. | ADDL.S.P | 1 | - | - | - | - | 1 |
| 3. | DY. S. P. | 3 | - | 1 | - | - | 4 |
| 4. | CPI | 9 | - | - | - | - | 9 |
| 8. | P.I./ RPI | 3 | - | 2 | - | 1 | 6 |
| 9. | PSI/RSI | 35 | 1 | 6 | - | 4 | 46 |
| 10. | ASI/ARSI | 50 | 2 | 6 | - | 8 | 66 |
| 11. | HC/AHC | 238 | 16 | 45 | - | 13 | 312 |
| 12. | PC/APC | 696 | 45 | 208 | - | 9 | 958 |
| | **Total** | **1036** | **64** | **268** | **-** | **35** | **1403** |

**STATEMENT SHOWING THE SANCTIONED STRENGTH OF MINISTERIAL STAFF**

| | | | |
|---|---|---|---|
| 1. | Asst. Administrative Officer | - | 01 |
| 2. | Section Superintendent | - | 02 |
| 3. | First Division Assistant | - | 09 |
| 4. | Second Division Assistant | - | 15 |
| 5. | Third Division Assistant | - | 01 |
| 6. | Stenographers | - | 02 |
| 7. | Typists | - | 03 |
| 8. | Dalayath | - | 04 |
| | **Total** | **-** | **37** |

**STATEMENT SHOWING THE NUMBER OF SUB DIVISIONS/ CIRCLES/ POLICE STATIONS AND OUT- POSTS IN RAICHUR DISTRICT**

| Sl. No. | Name of the Unit | No. of Divisions | No. of sub Divisions | No. of Circles | No. of Police Stations | No. of Out Posts |
|---|---|---|---|---|---|---|
| 1 | Raichur | 01 | 03 | 09 | 24 | 02 |

PR- 1126 **Superintendent of Police Raichur.**

**ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡವಳಿ**

**ವಿಷಯ:** ಶ್ರೀ ಎ.ಯು. ಹಾದಿಮನಿ, ದ್ವಿದಭೂ (ಹಾಲಿ ಅಮಾನತ್ತಿನಲ್ಲಿ) ಇವರ ವಿರುದ್ಧದ ಶಿಸ್ತು ಪ್ರಕರಣದ ಅಂತಿಮ ಆದೇಶ ಕುರಿತು.

**ಉಲ್ಲೇಖ:** 1) ಭೂಜಂನಿ, ಬೆಂಗಳೂರು ರವರ ನಡವಳಿ ಸಂಖ್ಯೆ: ಸಿಬ್ಬಂದಿ.ಶಿಸ್ತು.111:97-98, ದಿನಾಂಕ: 26/28.09.98.

2) ಸರ್ಕಾರದ ಪತ್ರದ ಸಂಖ್ಯೆ: ಕಂಇ 57:ಭೂದಾಸೇ (3) 2005, ದಿನಾಂಕ: 27/28.04.2005.

3) ಈ ಕಛೇರಿ ಸಮಸಂಖ್ಯೆ ಕಾರಣ ಕೇಳಿ ನೋಟೀಸ್ ದಿನಾಂಕ: 13.9.05 (ಆರೋಪ ಪಟ್ಟಿಯೊಂದಿಗೆ)

4) ನೌಕರರ ರಕ್ಷಣಾ ಹೇಳಿಕೆ ದಿನಾಂಕ: 6.10.05.

5) ಈ ಕಛೇರಿ ನಡವಳಿ ಸಮಸಂಖ್ಯೆ ದಿನಾಂಕ: 17/19.11.05 (ವಿಚಾರಣಾಧಿಕಾರಿಗಳ ನೇಮಕ)

6) ವಿಚಾರಣಾಧಿಕಾರಿಗಳು, ಭೂಜಂನಿ (ವಿ ಮತ್ತು ತ) ಇವರ ವಿಚಾರಣಾ ವರದಿ ದಿನಾಂಕ: 12.6.06.'

7) ಈ ಕಛೇರಿ ಎರಡನೇ ಕಾರಣ ಕೇಳಿ ನೋಟೀಸು ದಿನಾಂಕ: 11.7.06.

8) ನೌಕರರ ಬರಹ ಹೇಳಿಕೆ ದಿನಾಂಕ: 19.7.06.

**ಪ್ರಸ್ತಾವನೆ:**

ಶ್ರೀ ಎ.ಯು.ಹಾದಿಮನಿ, ದ್ವಿತೀಯ ದರ್ಜೆ ಭೂಮಾಪಕರು (ಹಾಲಿ ಅಮಾನತ್ತಿನಲ್ಲಿ) ಇವರು ಭೂದಾಖಲೆಗಳ ಸಹಾಯಕ ನಿರ್ದೇಶಕರು, ದಾವಣಗೆರೆ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ ದಿನಾಂಕ: 3.12.97 ರಿಂದ 24.12.97 ರವರೆಗೆ ಗಳಿಕೆ ರಜೆಯ ಮೇಲೆ ತೆರಳಿದ್ದು, ನಂತರ ಯಾವುದೇ ರಜೆ ಅರ್ಜಿಯನ್ನು ಸಲ್ಲಿಸದೆ ಅನಧಿಕೃತ ಗೈರು ಹಾಜರಾಗಿರುತ್ತಾರೆ. ಈ ಗೈರು ಹಾಜರಿ ಅವಧಿಯಲ್ಲಿ ಸದರಿ ಭೂಮಾಪಕರನ್ನು ಕ್ರಿಮಿನಲ್ ಪ್ರಕರಣಕ್ಕೆ ಸಂಬಂಧಿಸಿದಂತೆ, ಇಂಡಿ ಆರಕ್ಷಕ ಉಪ ನಿರೀಕ್ಷಕರು, ಇಂಡಿ ಪೊಲೀಸ್ ಠಾಣೆಯಲ್ಲಿ ಪ್ರಕರಣ ಸಂಖ್ಯೆ: 43:98 ರಲ್ಲಿ ಸಿ.ಆರ್.ಪಿ. ಕಲಂ 151, 107 ರನ್ವಯ ತಾಲ್ಲೂಕು ದಂಡಾಧಿಕಾರಿಗಳ ಆದೇಶದನ್ವಯ ದಿನಾಂಕ: 23.2.98 ರಿಂದ 26.2.96 ರವರೆಗೆ ನ್ಯಾಯಾಂಗ ಬಂಧನದಲ್ಲಿದ್ದುದರ ವರದಿಯನ್ನು ಆಧರಿಸಿ, ಆಗಿನ ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಂಗಳೂರು ರವರು ಉಲ್ಲೇಖ (1)ರ ನಡವಳಿ ದಿನಾಂಕ: 26/28.09.98 ರಲ್ಲಿ ನ್ಯಾಯಾಲಯ ತೀರ್ಮಾನ : ಇಲಾಖಾ ವಿಚಾರಣೆ ಕಾದಿರಿಸಿ ಅಮಾನತ್ತಿನಲ್ಲಿಟ್ಟು ಆದೇಶಿಸಿರುತ್ತಾರೆ. ಸದರಿ ನೌಕರರು ದಿನಾಂಕ: 3.2.97 ರಿಂದಲೇ ಸರ್ಕಾರಿ ಕೆಲಸಕ್ಕೆ ಗೈರು ಹಾಜರಾಗಿರುವುದು, ದಿನಾಂಕ: 8.5.98ರ ಭೂದಾಖಲೆಗಳ ಸಹಾಯಕ ನಿರ್ದೇಶಕರು, ದಾವಣಗೆರೆ ರವರ ವರದಿಯಿಂದ ಕಂಡುಬಂದಿದ್ದು, ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಂಗಳೂರು ರವರು ಅಮಾನತ್ತು ಮಾಡಿದ ಆದೇಶದ ದಿನದಂದು ಸಹ ಅನಧಿಕೃತ ಗೈರು ಹಾಜರಿಯಾಗಿರುವುದು ದಾಖಲೆಗಳಿಂದ ಕಂಡುಬರುತ್ತದೆ. ಈ ಮಧ್ಯೆ ಈ ಇಲಾಖೆಯು ಕಂದಾಯ ಇಲಾಖೆಯೊಂದಿಗೆ ಕಾರ್ಯ ವಿಲೀನಗೊಂಡ ನಂತರ ಶಿಸ್ತು ಪ್ರಕರಣದ ಕಡತಗಳು ಈ ಕಛೇರಿಗೆ ಹಸ್ತಾಂತರಗೊಂಡಿದ್ದು, ಈ ನೌಕರರಿಗೆ ಸಂಬಂಧಿಸಿದ ಕಡತವನ್ನು ಪರಿಶೀಲಿಸಿ, ನೌಕರರ ಗೈರು ಹಾಜರಿ ಬಗ್ಗೆ ಉಲ್ಲೇಖ (2) ರಲ್ಲಿ ನೌಕರರಿಗೆ ಕಾರಣ ಕೇಳಿ ನೊಟೀಸಿನೊಂದಿಗೆ ದೋಷಾರೋಪಣೆ ಪಟ್ಟಿಯನ್ನು ಅವರ ಸ್ವವಿಳಾಸಕ್ಕೆ ನೋಂದಣಿ ಅಂಚೆ ಮೂಲಕ ರವಾನಿಸಿರುವುದನ್ನು ದಿನಾಂಕ: 6.10.05 ರಂದು ಸ್ವೀಕರಿಸಿ ದಿನಾಂಕ: 6.10.05 ರಂದು ಸಮಜಾಯಿಷಿಯನ್ನು ನೀಡಿರುತ್ತಾರೆ.

ಶ್ರೀ ಎ.ಯು. ಹಾದಿಮನಿ, ದ್ವಿತೀಯ ದರ್ಜೆ ಭೂಮಾಪಕರು ಹಾಲಿ ಅಮಾನತ್ತಿನಲ್ಲಿ ಇವರ ವಿರುದ್ಧ ಮಾಡಲಾದ ದೋಷಾರೋಪಣೆಯ ಉದ್ಧೃತ್ಯ ಭಾಗವನ್ನು ಈ ಕೆಳಗಿನಂತೆ ಪುನರುಚ್ಚರಿಸಿದೆ.

**ಆರೋಪ-1:**

"ಶ್ರೀ ಅಲ್ಲಾಭಕ್ಷ ಉತಾಲ್‌ಸಾಬ್ ಹಾದಿಮನಿ, (ಎ.ಯು.ಹಾದಿಮನಿ) ದ್ವಿತೀಯ ದರ್ಜೆ ಭೂಮಾಪಕರಾದ ನೀವು ಭೂದಾಖಲೆಗಳ ಸಹಾಯಕ ನಿರ್ದೇಶಕರು, ದಾವಣಗೆರೆ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, (ಹಾಲಿ ಅಮಾನತ್ತಿನಲ್ಲಿ) ದಿನಾಂಕ: 3.12.97 ರಿಂದ 24.12.97 ರವರೆಗೆ ಬಿ.ಎ.ಎಂ.ಎಸ್. ಪರೀಕ್ಷೆಕಟ್ಟುವ ಸಲುವಾಗಿ ಗಳಿಕೆ ರಜೆಯ ಮೇಲೆ ಹೋಗಿದ್ದು, ರಜೆ ಮುಗಿದ ನಂತರ ದಿನಾಂಕ: 25.12.97 ರಂದು ಕರ್ತವ್ಯಕ್ಕೆ ಹಾಜರಾಗಬೇಕಾಗಿದ್ದು, ಆದರೆ ನೀವು ಕರ್ತವ್ಯಕ್ಕೆ ಹಾಜರಾಗದೆ ದಿನಾಂಕ: 27.12.97 ರಂದು ಟೆಲಿಗ್ರಾಂ ಮೂಲಕ ಆರೋಗ್ಯ ಸರಿ ಇಲ್ಲ ಎಂಬ

ಕಾರಣ ನೀಡಿ ರಜೆ ಮುಂದುವರೆಸಿ, ವೈದ್ಯಕೀಯ ಪ್ರಮಾಣ ಪತ್ರ ಸಲ್ಲಿಸದೆ, ರಜೆಯನ್ನು ಮಂಜೂರು ಮಾಡಿಸಿಕೊಳ್ಳದೇ ಗೈರು ಹಾಜರಿಯಲ್ಲಿ ಮುಂದುವರೆದಿರುವುದರಿಂದ, ಭೂದಾಖಲೆಗಳ ಸಹಾಯಕ ನಿರ್ದೇಶಕರು, ದಾವಣಗೆರೆ ಇವರು ಕರ್ತವ್ಯಕ್ಕೆ ಹಾಜರಾಗಲು ಜ್ಞಾಪನವನ್ನು ನೀಡಿದ್ದರೂ ಸಹ ನೀವು ಕರ್ತವ್ಯಕ್ಕೆ ಗೈರು ಹಾಜರಾಗಿ ಮೇಲಾಧಿಕಾರಿಗಳ ಸೂಚನೆಯನ್ನು ಉಲ್ಲಂಘಿಸಿ, ದೈನಂದಿನ ಸರ್ಕಾರಿ ಕೆಲಸಕ್ಕೆ ಅಡಚಣೆ ಉಂಟು ಮಾಡಿ ದುರ್ವರ್ತನೆ ಎಸಗಿ ಒಬ್ಬ ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿ, ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮ 1966ರ ನಿಯಮ 3(1) (11) ಮತ್ತು (111) ಅನ್ನು ಉಲ್ಲಂಘಿಸಿ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957 ರನ್ವಯ ಶಿಸ್ತು ಕ್ರಮ ಜರುಗಿಸಲು ಅನುವು ಮಾಡಿಕೊಟ್ಟಿರುತ್ತೀರಿ. ಆದ್ದರಿಂದ ಈ ಆರೋಪ."

**ಆರೋಪ-2:**

"ಶ್ರೀ ಅಲ್ಲಾಭಕ್ಷ ಉತಾಲ್‌ಸಾಬ್ ಹಾದಿಮನಿ (ಎ.ಯು.ಹಾದಿಮನಿ) ದ್ವಿತೀಯ ದರ್ಜೆ ಭೂಮಾಪಕರು ಆದ ನೀವು ಭೂದಾಖಲೆಗಳ ಸಹಾಯಕ ನಿರ್ದೇಶಕರು, ದಾವಣಗೆರೆ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಹಾಲಿ ಅಮಾನತ್ತಿನಲ್ಲಿ) ಗೈರು ಹಾಜರಾಗಿದ್ದು, ಅಹಿರಸಂಗ ಗ್ರಾಮದಲ್ಲಿ ತನ್ನ ಸಂಬಂಧಿಕರಿಗೆ ಅಮೊಧ ಮಾಡುವಂತೆ ಪ್ರಚೋದನೆ ನೀಡುತ್ತಿರುವ ಕಾರಣ, ಇಂಡಿ ಪೊಲೀಸ್ ಠಾಣೆಯಲ್ಲಿ ಕ್ರಿಮಿನಲ್ ಮೊಕದ್ದಮೆ ದಾಖಲಾಗಿ, ದಿನಾಂಕ: 23.2.98 ರಿಂದ 26.2.98 ರವರೆಗೆ ಅಂದರೆ 48 ಗಂಟೆಗಳಿಗೂ ಮೀರಿ, ತಾಲ್ಲೂಕು ದಂಡಾಧಿಕಾರಿಗಳ ಕಸ್ಟಡಿಯಲ್ಲಿ ನೀವು ಇರುವುದು ಸ್ಪಷ್ಟವಾಗಿರುತ್ತದೆ. ಇದರಿಂದ ನೌಕರರಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿ, ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮ 1966ರ ನಿಯಮ 3(111) ಅನ್ನು ಉಲ್ಲಂಘಿಸಿರುತ್ತೀರಿ. ಇದರಿಂದ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957 ರನ್ವಯ ಶಿಸ್ತು ಕ್ರಮ ಜರುಗಿಸಲು ಅನುವು ಮಾಡಿಕೊಟ್ಟಿರುತ್ತೀರಾ. ಆ ಕಾರಣದಿಂದ ಈ ಆರೋಪ.

**ಆರೋಪ-3:**

"ಶ್ರೀ ಅಲ್ಲಾಭಕ್ಷ ಉತಾಲ್‌ಸಾಬ್ ಹಾದಿಮನಿ (ಎ.ಯು.ಹಾದಿಮನಿ) ದ್ವಿತೀಯ ದರ್ಜೆ ಭೂಮಾಪಕರು ಆದ ನೀವು ಭೂದಾಖಲೆಗಳ ಸಹಾಯಕ ನಿರ್ದೇಶಕರು, ದಾವಣಗೆರೆ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಸಮಯದಲ್ಲಿ (ಹಾಲಿ ಅಮಾನತ್ತಿನಲ್ಲಿ) ಕರ್ತವ್ಯಕ್ಕೆ ಗೈರು ಹಾಜರಾಗಿ ನಿಮ್ಮ ವಾಸಸ್ಥಳವಾದ ಅಹಿರಸಂಗ ಗ್ರಾಮದಲ್ಲಿ ದಿನಾಂಕ: 25.12.97 ರಂದು ಅಮಿನಬಿ ಗಂಡ ಭಾಷ್ಯಾಸಾಬ್, ಮುಲ್ಲಾ ಸಾ: ಅಹಿರಸಂಗ, ಹರಳಯ್ಯನ ಹಟ್ಟಿಯಲ್ಲಿರುವ ಮನೆಗೆ ಹೋಗಿ, ಸದರಿಯವರ ಮೇಲೆ ನೀವು ಹಲ್ಲೆ ನಡೆಸಿದ ಮೇರೆಗೆ ಇಂಡಿ ಪೊಲೀಸ್ ಠಾಣೆಯಲ್ಲಿ ಪಿ.ಎಸ್.ಸಂಖ್ಯೆ: 230:97ರ ಪ್ರಕಾರ ಮೊಕದ್ದಮೆ ದಾಖಲಾಗಿರುತ್ತದೆ. ನೀವು ಸರ್ಕಾರಿ ನೌಕರರಾಗಿ ನಿಮ್ಮ ವ್ಯಾಪ್ತಿ ಮೀರಿ ಕ್ರಿಮಿನಲ್ ಪ್ರಕರಣದಲ್ಲಿ ಭಾಗಿಯಾಗಿ ದುರ್ನಡತೆ ಎಸಗಿ ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿ, ಕ್ರಿಮಿನಲ್ ಪ್ರಕರಣದಲ್ಲಿ ದಾಖಲಾಗಿರುವುದರಿಂದ, ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮ 1966ರ ನಿಯಮ 3(111) ಅನ್ನು ಉಲ್ಲಂಘಿಸಿ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957 ರನ್ವಯ ಶಿಸ್ತು ಕ್ರಮ ಜರುಗಿಸಲು ಅನುವು ಮಾಡಿಕೊಟ್ಟಿರುತ್ತೀರಾ. ಆದ್ದರಿಂದ ಈ ಆರೋಪ.

**ಆರೋಪ-4:**

"ಶ್ರೀ ಅಲ್ಲಾಭಕ್ಷ ಉತಾಲ್‌ಸಾಬ್ ಹಾದಿಮನಿ (ಎ.ಯು.ಹಾದಿಮನಿ) ದ್ವಿತೀಯ ದರ್ಜೆ ಭೂಮಾಪಕರಾದ ನೀವು ಭೂದಾಖಲೆಗಳ ಸಹಾಯಕ ನಿರ್ದೇಶಕರು, ದಾವಣಗೆರೆ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ ಕರ್ತವ್ಯಕ್ಕೆ ಗೈರು ಹಾಜರಾಗಿ ನಿಮ್ಮ ವಾಸಸ್ಥಳದಲ್ಲಿ ಇದ್ದುಕೊಂಡು, (ಹಾಲಿ ಅಮಾನತ್ತಿನಲ್ಲಿ) ನೀವು ಅಹಿರಸಂಗ ಗ್ರಾಮದ ನಿವಾಸಿ, ಮೆರುಂಬಿ ಗಂ. ವಲ್ಲಸಾಬ್ ಇವರ ಮೇಲೆ ದಿನಾಂಕ: 6.2.98 ರಂದು ಹಲ್ಲೆ ನಡೆಸಿದ ಮೇರೆಗೆ ಇಂಡಿ ಪೊಲೀಸ್ ಠಾಣೆಯಲ್ಲಿ ಪಿ.ಎಸ್.29:98ರ ಪ್ರಕಾರ ಮೊಕದ್ದಮೆ ದಾಖಲಾಗಿರುತ್ತದೆ. ನೀವು ಸರ್ಕಾರಿ ನೌಕರರಾಗಿ ನಿಮ್ಮ ವ್ಯಾಪ್ತಿ ಮೀರಿ ಕ್ರಿಮಿನಲ್ ಪ್ರಕರಣದಲ್ಲಿ ಭಾಗಿಯಾಗಿ ದುರ್ನಡತೆ ಎಸಗಿ, ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿ, ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮ 1966ರ ನಿಯಮ 3(111) ಅನ್ನು ಉಲ್ಲಂಘಿಸಿ, ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957 ರನ್ವಯ ಶಿಸ್ತು ಕ್ರಮ ಜರುಗಿಸಲು ಅನುವು ಮಾಡಿಕೊಟ್ಟಿರುತ್ತೀರಾ. ಆದ ಕಾರಣ ಈ ಆರೋಪ.

**ಆರೋಪ-5:**

"ಶ್ರೀ ಅಲ್ಲಾಭಕ್ಷ ಉತಾಲ್‌ಸಾಬ್ ಹಾದಿಮನಿ (ಎ.ಯು.ಹಾದಿಮನಿ) ದ್ವಿತೀಯ ದರ್ಜೆ ಭೂಮಾಪಕರಾದ ನೀವು ಭೂದಾಖಲೆಗಳ ಸಹಾಯಕ ನಿರ್ದೇಶಕರು, ದಾವಣಗೆರೆ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ ಕರ್ತವ್ಯಕ್ಕೆ ಗೈರು ಹಾಜರಾಗಿ, ನಿಮ್ಮ ವಾಸಸ್ಥಳವಾದ ಅಹಿರಸಂಗ ಗ್ರಾಮದಲ್ಲಿ (ಹಾಲಿ ಅಮಾನತ್ತಿನಲ್ಲಿ) ನಿಮಗೂ ಹಾಗೂ ಫಿರ್ಯಾಧಿದಾರರಾದ ಶ್ರೀ ರಮಜಾನ್ ಸಾಬ್ ಇಮಾಮ್‌ಸಾಬ್ ಮುಲ್ಲಾಸಾಬ್, ಅಹಿರಸಂಗ ಇವರಿಗೂ ಜಮೀನಿನ ದಾರಿಯ ಸಲುವಾಗಿ ಹಾಗೂ ಜಮೀನಿನ ನ್ಯಾಯದ ಸಿಟ್ಟು ಹಿಡಿದು, ನೀವು ಆಯುಧಗಳನ್ನು ಹಿಡಿದುಕೊಂಡು ಬಾಳಾಸಾಬ ಮುಲ್ಲಾ ಇವರ ಮೇಲೆ ಹಲ್ಲೆ ನಡೆಸಿ, ಕುತ್ತಿಗೆಯ ಹತ್ತಿರ ಹೊಡೆದು ಕೊಲೆ ಮಾಡಿ, ಫಿರ್ಯಾಧಿದಾರರಿಗೂ ಹೊಡೆಯುವ ಸಲುವಾಗಿ ಬೆನ್ನು ಹತ್ತಿದ್ದರಿಂದ, ಇಂಡಿ ಪೊಲೀಸ್ ಠಾಣೆಯಲ್ಲಿ ದಿನಾಂಕ: 11.2.99 ರಂದು ಫಿರ್ಯಾಧಿದಾರರು ದೂರು ದಾಖಲಿಸಿರುತ್ತಾರೆ. ಅದರಂತೆ ನಿಮ್ಮ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ: 35:99 ಆಗಿರುತ್ತದೆ. ನಿಮ್ಮ ವಿರುದ್ಧ ಕೊಲೆ ಪ್ರಕರಣವು ಸಹ ದಾಖಲಾಗಿರುತ್ತದೆ. ನೀವು ಸರ್ಕಾರಿ ಕೆಲಸಕ್ಕೆ ಗೈರು ಹಾಜರಾಗಿ ಇನ್ನಿತರೆ ಸಾರ್ವಜನಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವುದು ಕಂಡುಬರುತ್ತದೆ. ನೀವು ಸರ್ಕಾರಿ ನೌಕರರಾಗಿ ನಿಮ್ಮ ವ್ಯಾಪ್ತಿ ಮೀರಿ ಕ್ರಿಮಿನಲ್ ಪ್ರಕರಣದಲ್ಲಿ ಭಾಗಿಯಾಗಿ ದುರ್ನಡತೆ ಎಸಗಿ, ಕರ್ನಾಟಕ ಸರ್ಕಾರಿ ಸೇವಾ (ನಡತೆ) 1996ರ ನಿಯಮ 3(111) ಅನ್ನು ಉಲ್ಲಂಘಿಸಿ, ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957 ರನ್ವಯ ಶಿಸ್ತು ಕ್ರಮ ಜರುಗಿಸಲು ಅನುವು ಮಾಡಿಕೊಟ್ಟಿರುತ್ತೀರಾ. ಆ ಕಾರಣ ಈ ಆರೋಪ."

**ಆರೋಪ-6:**

"ಶ್ರೀ ಅಲ್ಲಾಭಕ್ಷ ಉತಾಲ್‌ಸಾಬ್ ಹಾದಿಮನಿ (ಎ.ಯು.ಹಾದಿಮನಿ) ದ್ವಿತೀಯ ದರ್ಜೆ ಭೂಮಾಪಕರು ಆದ ನೀವು ಭೂದಾಖಲೆಗಳ ಸಹಾಯಕ ನಿರ್ದೇಶಕರವರ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ (ಹಾಲಿ ಅಮಾನತ್ತಿನಲ್ಲಿ) ಕರ್ತವ್ಯಕ್ಕೆ ಗೈರು ಹಾಜರಾಗಿ ಮೇಲಿನ

ಪ್ರಕರಣದಲ್ಲಿ ವಿವರಿಸಿರುವಂತೆ ಆರೋಪಗಳಲ್ಲಿ ಕ್ರಿಮಿನಲ್ ಪ್ರಕರಣಗಳಲ್ಲಿ ಭಾಗಿಯಾಗಿರುವುದರಿಂದ, ಇಂಡಿ ಪೊಲೀಸ್ ಠಾಣೆಯಲ್ಲಿ 44:99, 45:99 ಹಾಗೂ 204:99ರ ಗುನ್ಹೆಗಳಲ್ಲಿ ಪರಾರಿ ಇದ್ದು, ನಿಮ್ಮನ್ನು ದಿನಾಂಕ: 19.1.2001 ರಂದು ದಸ್ತಗಿರಿ ಮಾಡಿ ನ್ಯಾಯಾಲಯದ ಬಂಧನದಲ್ಲಿಟ್ಟು ನಂತರ ಬಿಜಾಪುರ ಕೇಂದ್ರ ಕಾರಾಗೃಹದಲ್ಲಿ ದಿನಾಂಕ: 30.6.2004 ರಿಂದ ಕಾರಾಗೃಹದಲ್ಲಿ ದಾಖಲಾಗಿರುವುದು ಕಂಡು ಬರುತ್ತದೆ. ನೀವು ಜವಾಬ್ದಾರಿಯುತ ಸರ್ಕಾರಿ ನೌಕರರಾಗಿದ್ದು, ನೀವು ವ್ಯಾಪ್ತಿ ಮೀರಿ ಸಾರ್ವಜನಿಕ ಚಟುವಟಿಕೆಗಳಲ್ಲಿ ಭಾಗವಹಿಸಿ, ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿ, ದುರ್ನಡತೆ ಎಸಗಿ, ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮ 1966ರ ನಿಯಮ 3(iii) ಅನ್ನು ಉಲ್ಲಂಘಿಸಿ, ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957 ರನ್ವಯ ಶಿಸ್ತು ಕ್ರಮ ಜರುಗಿಸಲು ಅನುವು ಮಾಡಿಕೊಟ್ಟಿರುತ್ತೀರಿ. ಆ ಕಾರಣ, ಈ ಆರೋಪ.”

(ಈ ಪ್ರಕರಣದಲ್ಲಿ ಇನ್ನು ಮುಂದೆ ಈ ನೌಕರರನ್ನು ಆರೋಪಿತ ನೌಕರರೆಂದು ಕರೆಯಲಾಗಿದೆ)

ಆರೋಪಿತ ನೌಕರರು ಅವರ ಸಮಜಾಯಿಷಿಯಲ್ಲಿ ಅವರ ಮೇಲೆ ಮಾಡಲಾದ ಆರೋಪವನ್ನು ನಿರಾಕರಿಸಿದ ಕಾರಣ, ಈ ಕಛೇರಿ ನಡವಳಿ ದಿನಾಂಕ: 17/19.11.05 ರಲ್ಲಿ ಭೂದಾಖಲೆಗಳ ಜಂಟಿ ನಿರ್ದೇಶಕರು, (ವಿಚಾರಣೆ ಮತ್ತು ತನಿಖೆ) ಕೇಂದ್ರ ಕಛೇರಿ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿದೆ.

ಸದರಿ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳು ನಿಯಮಾನುಸಾರ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ದಿನಾಂಕ: 12.6.06 ರಂದು ಈ ಕಛೇರಿಗೆ ಸಲ್ಲಿಸಿರುತ್ತಾರೆ. ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿ ಮತ್ತು ದಾಖಲಾತಿಗಳನ್ನು ಪರಿಶೀಲಿಸಿ, ಆರೋಪಿತ ನೌಕರರ ಮೇಲೆ ಮಾಡಲಾದ ಆರೋಪವು ಸಾಬೀತಾಗಿದೆ ಎಂಬ ವಿಚಾರಣಾಧಿಕಾರಿಗಳ ಅಭಿಪ್ರಾಯವನ್ನು ಒಪ್ಪಿ, ಈ ಕಛೇರಿಯಿಂದ ದಿನಾಂಕ: 11.7.2006 ರಂದು ಎರಡನೇ ಕಾರಣ ಕೇಳಿ ನೋಟೀಸಿನೊಂದಿಗೆ ವಿಚಾರಣಾ ವರದಿಯ ಪ್ರತಿಯನ್ನು ಆರೋಪಿತ ನೌಕರರ ಸ್ವವಿಳಾಸಕ್ಕೆ ನೋಂದಣಿ ಅಂಚೆ ಮೂಲಕ ರವಾನಿಸಿದಂತೆ ದಿನಾಂಕ: 17.7.2006 ರಂದು ಸ್ವೀಕರಿಸಿ, ದಿನಾಂಕ: 19.7.2006 ರಂದು ಬರಹ ಹೇಳಿಕೆಯನ್ನು ನೀಡಿ, ಅಮಾನತ್ತು ತೆರವುಗೊಳಿಸುವ ಬಗ್ಗೆ ಕೋರಿ ಅವರ ಮೇಲಿನ ಆರೋಪಗಳನ್ನು ನಿರಾಕರಿಸಿರುತ್ತಾರೆ.

ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳ ವಿಚಾರಣಾ ವರದಿ ಮತ್ತು ವಿಚಾರಣೆ ದಾಖಲಾತಿಗಳು ಹಾಗೂ ಪ್ರಕರಣದ ಬಗ್ಗೆ ದಾಖಲಾತಿಗಳನ್ನು ಆರೋಪಿತ ನೌಕರರು ದಿನಾಂಕ: 19.7.2006 ರಂದು ನೀಡಿರುವ ಬರಹ ಹೇಳಿಕೆಯೊಂದಿಗೆ ಪರಿಶೀಲಿಸಲಾಗಿ, ಆರೋಪಿತ ನೌಕರರು ದಿನಾಂಕ: 3.2.97 ರಿಂದ ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಂಗಳೂರು ರವರು ದಿನಾಂಕ: 28.9.98 ರಂದು ಅಮಾನತ್ತು ಗೊಳಿಸುವವರೆವಿಗೂ ಅನಧಿಕೃತ ಗೈರು ಹಾಜರಾಗಿರುವುದು (ಅಂದರೆ ದಿನಾಂಕ: 3.12.97 ರಿಂದ 28.9.98 ರವರೆಗೆ) ವಿಚಾರಣಾ ದಾಖಲೆಗಳಿಂದ ಕಂಡು ಬಂದಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಸಿಬ್ಬಂದಿ.ಶಿಸ್ತು.ಅಗೈಹಾ.54:1997-98, ದಿನಾಂಕ: 21ನೇ ಆಗಸ್ಟ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭದಲ್ಲಿ ಹಾಗೂ ಪ್ರಕರಣದ ದಾಖಲಾತಿಯನ್ನು ಹಾಗೂ ವಿಚಾರಣಾ ವರದಿ ಮತ್ತು ನೌಕರರ ರಕ್ಷಣಾ ಹೇಳಿಕೆಯೊಂದಿಗೆ ಪರಿಶೀಲಿಸಲಾಗಿ, ಆಪಾದಿತ ನೌಕರರು ದಿನಾಂಕ: 3.12.97 ರಿಂದ ಭೂದಾಖಲೆಗಳ ಜಂಟಿ ನಿರ್ದೇಶಕರವರ ಅಮಾನತ್ತು ಆದೇಶ ಹೊರಡಿಸಿದ ದಿನಾಂಕ: 28.9.98 ರವರೆವಿಗೂ ಅನಧಿಕೃತ ಗೈರು ಹಾಜರಾಗಿರುವುದು ದಾಖಲೆಗಳಿಂದ ದೃಢಪಟ್ಟಿದೆ. ಈ ಪ್ರಕರಣದಲ್ಲಿ ನೌಕರರನ್ನು ಆಗಿನ ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಂಗಳೂರು ವಿಭಾಗ, ಬೆಂಗಳೂರು ರವರು ನೌಕರರು ಮೇಲ್ಕಂಡ ಅನಧಿಕೃತ ಗೈರು ಹಾಜರಿ ಅವಧಿಯಲ್ಲಿ ದಿನಾಂಕ: 23.02.98 ರಿಂದ 26.02.98 ರವರೆಗೆ ಅವರ ವಿರುದ್ಧ ತಾಲ್ಲೂಕು ದಂಡಾಧಿಕಾರಿಗಳು ಇಂಡಿಯಲ್ಲಿ ದಾಖಲಾಗಿದ್ದ ಪ್ರಕರಣ ಸಂಖ್ಯೆ: 43:98 ರಲ್ಲಿ ನೌಕರರನ್ನು ನ್ಯಾಯಾಂಗ ಕಸ್ಟಡಿಯಲ್ಲಿ ಇಟ್ಟಿರುವ ಸಂದರ್ಭದಲ್ಲಿ ದಿನಾಂಕ: 23.2.98 ರಿಂದ ಅಮಾನತ್ತಿನಲ್ಲಿಡಲಾಗಿದೆ ಎಂದು ಭಾವಿಸಲು ಆದೇಶಿಸಿರುವುದು ಕಂಡುಬರುತ್ತದೆ. ಅಮಾನತ್ತು ಹೊರಡಿಸಿದ ಆದೇಶದ ದಿನದಂದು ನೌಕರರು ನ್ಯಾಯಾಂಗ ಕಸ್ಟಡಿಯಲ್ಲಿರದೆ ದಿನಾಂಕ: 23.12.97 ರಿಂದಲೇ ಸರ್ಕಾರಿ ಅನಧಿಕೃತ ಗೈರು ಹಾಜರಾಗಿರುತ್ತಾರೆ.

ನೌಕರರ ವಿರುದ್ಧ ದಿನಾಂಕ: 3.12.97 ರಿಂದ ಸರ್ಕಾರಿ ಕೆಲಸಕ್ಕೆ ಗೈರು ಹಾಜರಾಗಿರುವ ಆರೋಪವು ಸೇರಿದಂತೆ ನೌಕರರನ್ನು ಕ್ರಿಮಿನಲ್ ಆರೋಪಕ್ಕೆ ಸಂಬಂಧಿಸಿದಂತೆ ದಸ್ತಗಿರಿ ಮಾಡಿರುವ ಹಾಗೂ ಕಾರಾಗೃಹದಲ್ಲಿದ್ದ ಅಂಶಗಳ ಮೇಲೆ ವಿಚಾರಣಾ ಸಮಯದಲ್ಲಿ ಹಾಜರುಪಡಿಸಿರುವ ಸಾಕ್ಷಿ ಹೇಳಿಕೆ ಮತ್ತು ದಾಖಲಾತಿಗಳಂತೆ ವಿಚಾರಣಾಧಿಕಾರಿಯವರ ಅಭಿಪ್ರಾಯದಂತೆ, ಆರೋಪಿ ನೌಕರರ ಮೇಲೆ ಮಾಡಲಾಗಿರುವ ಆರು ಆರೋಪಗಳು ಸಾಬೀತಾಗಿರುತ್ತವೆ ಎಂದು ನಿರ್ಣಯಿಸಿರುವುದನ್ನು ಒಪ್ಪಿರುತ್ತೇನೆ. ಆಪಾದಿತ ನೌಕರರು ಸರ್ಕಾರಿ ಕೆಲಸಕ್ಕೆ 8.11.96 ರಂದು ಸೇರಿದ್ದು, ಸೇರಿದ ಒಂದು ವರ್ಷದ ನಂತರದ ಅವಧಿಯಲ್ಲಿ ಸರ್ಕಾರಿ ಕೆಲಸಕ್ಕೆ ದಿನಾಂಕ: 3.12.97 ರಿಂದ 28.9.98 ರವರೆಗೆ ಅನಧಿಕೃತ ಗೈರು ಹಾಜರಿ ಆಗಿದ್ದ ಅವರನ್ನು ಅವರ ಮೇಲೆ ದಾಖಲಾಗಿದ್ದ ಕ್ರಿಮಿನಲ್ ಪ್ರಕರಣದ ಆರೋಪದ ಇತ್ಯರ್ಥ ಕಾದಿರಿಸಿ, ಆಗಿನ ಭೂದಾಖಲೆಗಳ ಜಂಟಿ ನಿರ್ದೇಶಕರವರು ದಿನಾಂಕ: 28.9.98 ರಂದು ಅಮಾನತ್ತುಗೊಳಿಸಿರುವುದು, ವಿಚಾರಣಾ ಸಮಯದಲ್ಲಿ ಕಂಡುಬಂದ ಸಾಕ್ಷಿ ದಾಖಲೆಗಳಂತೆ ಆರೋಪಗಳು ಸಾಬೀತಾಗಿರುವ ಸಂದರ್ಭದಲ್ಲಿ ಹಾಗೂ ಆರೋಪಿತ ನೌಕರರಿಗೆ ಈ ಕಛೇರಿಯಿಂದ ದಿನಾಂಕ: 11.7.06 ರಂದು ನೀಡಿರುವ ಎರಡನೇ ಕಾರಣ ಕೇಳಿ ನೋಟೀಸಿಗೆ ಉತ್ತರವಾಗಿ ಸಲ್ಲಿಸಿರುವ ರಕ್ಷಣಾ ಹೇಳಿಕೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಆರೋಪಿತ ನೌಕರರು ಸೇವೆಯಿಂದ ಅವರನ್ನು ವಜಾಗೊಳಿಸುವ ದಂಡನೆಗೆ ಅರ್ಹರಾಗಿರುವರೆಂದು ಅಭಿಪ್ರಾಯಪಡುತ್ತೇನೆ. ಆ ಕಾರಣ, ಡಾ: ಬಾಬುರಾವ್ ಮುಡಬಿ, ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು, ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(viii) ರೊಂದಿಗೆ ಓದಿಕೊಂಡ ನಿಯಮ 9(3) ರನ್ವಯ ಶ್ರೀ ಎ.ಯು. ಹಾದಿಮನಿ, ದ್ವಿತೀಯ ದರ್ಜೆ ಭೂಮಾಪಕರು ಇವರನ್ನು ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದ್ದೇನೆ.

ಆಯುಕ್ತರು,

ಪಿ.ಆರ್. 1278 ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳು, ಬೆಂಗಳೂರು.

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ
ಬಸವಭವನ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧.

ವಿಷಯಃ ಬಾಗಲಕೋಟೆ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರಾಗಿದ್ದ ಶ್ರೀ ಎನ್.ಎನ್.ಧಾರವಾಡಕರ್ ಇವರ ದುರ್ನಡತೆ, ಅನಧಿಕೃತ ಗೈರು ಹಾಜರಿ ಮತ್ತು ಇನ್ನಿತರ ಆರೋಪಗಳ ಬಗ್ಗೆ ಕ್ರಮವಹಿಸುವ ಕುರಿತು.

ಓದಲಾಗಿದೆ : ೧ ಶ್ರೀ ಎನ್.ಎನ್.ಧಾರವಾಡಕರ್, ಹಿಂದಿನ ಅಧ್ಯಕ್ಷರು, ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಬಾಗಲಕೋಟೆ ಜಿಲ್ಲೆ, ಇವರ ವಿರುದ್ದದ ಆರೋಪಗಳ ಬಗ್ಗೆ ತೀರ್ಮಾನ ಸಂಖ್ಯೆ ಕರಾಆ/ಆಡಳಿತ/೨೦/೨೦೦೫ ದಿನಾಂಕ ೨೫.೦೭.೨೦೦೬

೨ ರಾಜ್ಯ ಆಯೋಗದ ಸಮಸಂಖ್ಯೆಯ ಪತ್ರ ದಿನಾಂಕ ೨೬.೦೭.೨೦೦೬

೩ ಶ್ರೀ ಎನ್.ಎನ್.ಧಾರವಾಡಕರ್, ಹಿಂದಿನ ಅಧ್ಯಕ್ಷರು, ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಬಾಗಲಕೋಟೆ ಇವರ ಹೇಳಿಕೆ ದಿನಾಂಕ ೨೧.೦೮.೨೦೦೬

ಪ್ರಸ್ತಾವನೆ :

ಶ್ರೀ ಎನ್.ಎನ್. ಧಾರವಾಡಕರ್, ಇವರು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ವೃಂದದ ಸೇವೆಯಲ್ಲಿ ಇದ್ದಾಗಲೇ ದಿನಾಂಕ ೧೩.೦೨.೨೦೦೪ ರಿಂದ ಬಾಗಲಕೋಟೆ ಜಿಲ್ಲಾ ವೇದಿಕೆಯ ಅಧ್ಯಕ್ಷರಾಗಿ ನೇಮಕಾತಿ ಹೊಂದಿ, ದಿನಾಂಕ ೧೩.೦೨.೨೦೦೪ ರಿಂದ ದಿನಾಂಕ ೦೮.೧೧.೨೦೦೫ರವರೆಗೆ ಬಾಗಲಕೋಟೆ ಜಿಲ್ಲಾ ವೇದಿಕೆಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ ಅವಧಿಯಲ್ಲಿ

೧. ೨೦೩ ದಿನಗಳಿಗೆ ಸಂಬಂಧಿಸಿದಂತೆ ವಿವಿಧ ದಿನಾಂಕಗಳಲ್ಲಿ ಬಾಗಲಕೋಟೆ ಜಿಲ್ಲಾ ವೇದಿಕೆಯ ಅಧ್ಯಕ್ಷರ ಕರ್ತವ್ಯವನ್ನು ನಿರ್ವಹಿಸಿ, ೩೮೩ ದಿನಗಳಿಗೆ ಸಂಬಂಧಿಸಿದಂತೆ ವಿವಿಧ ದಿನಾಂಕ ಹಾಗೂ ಅವಧಿಯಲ್ಲಿ ಬಾಗಲಕೋಟೆ ಜಿಲ್ಲಾ ವೇದಿಕೆಯ ಅಧ್ಯಕ್ಷರ ಕರ್ತವ್ಯವನ್ನು ನಿರ್ವಹಿಸದೆ ಸಕ್ಷಮ ಪ್ರಾಧಿಕಾರದಿಂದ ರಜೆಯನ್ನು ಮಂಜೂರು ಮಾಡಿಸಿಕೊಳ್ಳದೆ, ಅನಧಿಕೃತ ಗೈರು ಹಾಜರಾಗಿ ದುರ್ನಡತೆ ಎಸಗಿರುವ ಬಗ್ಗೆ,

೨. ಬಾಗಲಕೋಟೆ ಜಿಲ್ಲಾ ವೇದಿಕೆಯ ಸಾರ್ವಜನಿಕ ಸಂಪರ್ಕಕ್ಕೆ ದೊರೆಯದ ರೀತಿಯಲ್ಲಿ ದೂರವಾಣಿಯನ್ನು ಟೇಬಲ್‌ನ ಡ್ರಾಯರ್‌ನಲ್ಲಿಟ್ಟು ಬೀಗ ಹಾಕಿ ಅನಧಿಕೃತ ಗೈರು ಹಾಜರಾಗುವ ಮೂಲಕ ದುರ್ನಡತೆಯನ್ನು ಎಸಗಿರುವ ಬಗ್ಗೆ,

೩. ಬಾಗಲಕೋಟೆ ಜಿಲ್ಲಾ ವೇದಿಕೆಯ ಪ್ರಕರಣಗಳನ್ನು ಶೀಘ್ರವಾಗಿ ಇತ್ಯರ್ಥಪಡಿಸದೆ ಪ್ರಕರಣಗಳ ಇತ್ಯರ್ಥದಲ್ಲಿ ವಿಳಂಬ ನೀತಿಯನ್ನು ಅನುಸರಿಸುತ್ತಾ, ಪ್ರಕರಣಗಳನ್ನು ಇತ್ಯರ್ಥಕ್ಕಾಗಿ ನಿಗಧಿತ ಕಾಲಾವಧಿ ಮೀರಿ ಒಂದುವರೆ ವರ್ಷದ ನಂತರದ ಅವಧಿಯಲ್ಲಿಯೂ ಬಾಕಿ ಉಳಿಸಿಕೊಳ್ಳುವ ಮೂಲಕ ದುರ್ನಡತೆ ಎಸಗಿರುವ ಬಗ್ಗೆ,

೪. ಬಾಗಲಕೋಟೆ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗೆ, ಬಾಗಲಕೋಟೆ ಪಟ್ಟಣ ಅಭಿವೃದ್ಧಿ ಪ್ರಾಧಿಕಾರದ ಕಟ್ಟಡವನ್ನು ಬಾಡಿಗೆಗೆ ಪಡೆಯುವಾಗ ನಿಯಮಾನುಸಾರ ಅನುಸರಿಸಬೇಕಾದ ಕ್ರಮವನ್ನು ಅನುಸರಿಸದೇ ಸದರಿ ಕಟ್ಟಡಕ್ಕೆ ಸಕ್ಷಮ ಪ್ರಾಧಿಕಾರದಿಂದ ಬಾಡಿಗೆಯನ್ನು ನಿಗಧಿಪಡಿಸಿಕೊಳ್ಳದೆ, ಜಿಲ್ಲಾ ವೇದಿಕೆಯ ಕಟ್ಟಡದಲ್ಲಿಯೇ ತಮ್ಮ ಕುಟುಂಬ (ಹೆಂಡತಿ ಮಕ್ಕಳನ್ನು) ಹೊರತುಪಡಿಸಿ ಬೇರೆಯವರ ವಾಸಕ್ಕೆ ಅವಕಾಶ ಮಾಡಿಕೊಂಡು ಗ್ಯಾಸ್ ಸ್ಟೌವ್ ಇಟ್ಟುಕೊಂಡು ಅಡಿಗೆ ಮಾಡುತ್ತಾ ಜಿಲ್ಲಾ ವೇದಿಕೆಯ ಸುಗಮ ಕಾರ್ಯನಿರ್ವಹಣೆಗೆ ಮತ್ತು ಸುರಕ್ಷತೆಗೆ ಧಕ್ಕೆಯನ್ನು ಉಂಟು ಮಾಡಿರುವ ದುರ್ನಡತೆ ಬಗ್ಗೆ,

೫. ಬಾಗಲಕೋಟೆ ಜಿಲ್ಲಾ ವೇದಿಕೆಯಲ್ಲಿ ಅಧ್ಯಕ್ಷರು ಮತ್ತು ಸದಸ್ಯರಿಗೆ ಸಂಬಂಧಿಸಿದಂತೆ ಹಾಜರಾತಿ ಪುಸ್ತಕವನ್ನು ಪಾಲಿಸದೆ ಶ್ರೀ ಎನ್.ಎನ್.ಧಾರವಾಡಕರ್ ಇವರು ಅನಧೀಕೃತ ಗೈರು ಹಾಜರಾಗಿರುವುದಲ್ಲದೆ ಇನ್ನಿಬ್ಬರು ಸದಸ್ಯರು ಮತ್ತು ಸಿಬ್ಬಂದಿಗಳು ಜಿಲ್ಲಾ ವೇದಿಕೆಯ ಕರ್ತವ್ಯಕ್ಕೆ ಹಾಜರಾಗದೇ ಅನುಕ್ರಮವಾಗಿ ಗೌರವ ಧನ ಮತ್ತು ವೇತನ ಪಡೆಯಲು ಅವಕಾಶ ಮಾಡಿಕೊಡುತ್ತಾ, ರಜೆಯಲ್ಲಿ ನೌಕರರು ಚೌಕಾಸಿ ಮಾಡಿಕೊಳ್ಳಲು ಅವಕಾಶ ಮಾಡಿಕೊಟ್ಟಿರುವ ದುರ್ನಡತೆ ಬಗ್ಗೆ ಮತ್ತು

೬. ಬಾಗಲಕೋಟೆ ಜಿಲ್ಲಾ ವೇದಿಕೆಯ ಸಮಗ್ರ ತಪಾಸಣಾ ವರದಿಗೆ ಸಂಬಂಧಿಸಿದಂತೆ ಅನುಸರಣಾ ವರದಿಯನ್ನು ಸಲ್ಲಿಸಲು ವಿಳಂಬ ನೀತಿಯನ್ನು ಅನುಸರಿಸುವ ದುರ್ನಡತೆ ಬಗ್ಗೆ

ರಾಜ್ಯ ಆಯೋಗದ ತಿಳುವಳಿಕೆ ಪತ್ರ ಸಂಖ್ಯೆ ಕರಾಆ/ಆಡಳಿತ/೨೦/೨೦೦೫ ದಿನಾಂಕ ೨೨.೧೦.೨೦೦೫ ರ ಅನುಸಾರ ಆರೋಪ ಪಟ್ಟಿಯನ್ನು ಶ್ರೀ ಎನ್.ಎನ್.ಧಾರವಾಡಕರ್ ಇವರಿಗೆ ಜಾರಿ ಮಾಡಲಾಗಿರುತ್ತದೆ.

೨. ಶ್ರೀ ಎನ್.ಎನ್.ಧಾರವಾಡಕರ್‌ರವರು ದಿನಾಂಕ ೦೭.೧೧.೨೦೦೫ರ ಮನವಿ ಮೂಲಕ ಸಲ್ಲಿಸಿದ ಹೇಳಿಕೆಯನ್ನು, ದಿನಾಂಕ ೦೯.೧೧.೨೦೦೫ರ ಪೂರ್ವಾಹ್ನದಿಂದ ಜಾರಿಗೆ ಬರುವಂತೆ ಬಾಗಲಕೋಟೆ ಜಿಲ್ಲಾ ವೇದಿಕೆಯ ಅಧ್ಯಕ್ಷರ ಸ್ಥಾನಕ್ಕೆ ರಾಜೀನಾಮೆ ನೀಡಿರುವುದನ್ನು ಹಾಗೂ ಸದರಿ ರಾಜೀನಾಮೆಯು ದಿನಾಂಕ ೨೮.೦೬.೨೦೦೬ ರ ಸರ್ಕಾರದ ಅಧಿಸೂಚನೆ ಸಂಖ್ಯೆ ಅನಾಸ ೧೪೨ ಸಲಫ ೨೦೦೫ ರ ಅನುಸಾರ ಅಂಗೀಕೃತವಾದ ಹಿನ್ನಲೆಯಲ್ಲಿ ದಿನಾಂಕ ೨೨.೧೦.೨೦೦೫ ರ ತಿಳುವಳಿಕೆ ಮೂಲಕ ಜಾರಿ ಮಾಡಿದ ಆರೋಪಗಳಿಗೆ ಸಂಬಂಧಿಸಿದಂತೆ ಲಭ್ಯವಿರುವ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿಕೊಂಡು ಮೇಲೆ ಕ್ರಮಸಂಖ್ಯೆ (೧) ರಲ್ಲಿ ಓದಲಾಗುವ ತೀರ್ಮಾನದಡಿಯಲ್ಲಿ ಶ್ರೀ ಎನ್.ಎನ್.ಧಾರವಾಡಕರ್ ಇವರ ವಿರುದ್ದದ ಆರು ಆರೋಪಗಳು ಸಕಾರಾತ್ಮಕವಾಗಿ ರುಜುವಾತಾಗಿದೆಯೆಂದು ತೀರ್ಮಾನಕ್ಕೆ ಬರಲಾಗಿರುತ್ತದೆ. ಈ ತೀರ್ಮಾನದ ವಿವರವಾದ ಆದೇಶದ ಪ್ರತಿಯನ್ನು ಶ್ರೀ ಎನ್.ಎನ್.ಧಾರವಾಡಕರ್ ಇವರಿಗೆ ಮೇಲೆ ಕ್ರಮಸಂಖ್ಯೆ (೨) ರಲ್ಲಿ ಓದಲಾಗುವ ಪತ್ರದ ಮೂಲಕ ದಿನಾಂಕ ೨೭.೦೭.೨೦೦೬ ರಂದು ಜಾರಿ ಮಾಡಿದ್ದು ಮೇಲೆ ಕ್ರಮಸಂಖ್ಯೆ (೧) ರಲ್ಲಿ ಓದಲಾಗುವ ತೀರ್ಮಾನವನ್ನು ಅಲ್ಲಗಳೆಯುವಂತಹ/ವಿರೋಧಿಸುವಂತಹ ಹೇಳಿಕೆಗಳನ್ನು ಲಿಖಿತವಾಗಿ ಸೂಕ್ತ ದಾಖಲೆಗಳೊಂದಿಗೆ ೧೫ ದಿನಗಳೊಳಗಾಗಿ ರಾಜ್ಯ ಆಯೋಗಕ್ಕೆ ಸಲ್ಲಿಸುವಂತೆ ತಿಳಿಸಲಾಗಿದ್ದು, ಶ್ರೀ ಎನ್.ಎನ್.ಧಾರವಾಡಕರ್ ಇವರು ಮೇಲೆ ಕ್ರಮಸಂಖ್ಯೆ (೨) ರಲ್ಲಿ ಓದಲಾಗುವ ಪತ್ರ ಹಾಗೂ ಕ್ರಮಸಂಖ್ಯೆ (೧) ರಲ್ಲಿ

ಓದಲಾಗುವ ತೀರ್ಮಾನದ ಪ್ರತಿಯನ್ನು ದಿನಾಂಕ ೨೭.೦೭.೨೦೦೬ ರಂದು ಸ್ವೀಕರಿಸಿದ್ದರೂ ಕೂಡ ದಿನಾಂಕ ೧೩.೦೮.೨೦೦೬ ರಂದಿಗೆ ತಮ್ಮ ಹೇಳಿಕೆಯನ್ನು ಸಮರ್ಥಿಸುವಂತಹ ದಾಖಲೆಗಳೊಂದಿಗೆ ಸಲ್ಲಿಸದೇ, ದಿನಾಂಕ ೨೧.೦೮.೨೦೦೬ ರ ಮನವಿಯನ್ನು ದಿನಾಂಕ ೨೨.೦೮.೨೦೦೬ ರಂದು ರಾಜ್ಯ ಆಯೋಗಕ್ಕೆ ಸಲ್ಲಿಸಿರುವರು. ಸದರಿ ಮನವಿಯಲ್ಲಿ ಮೇಲೆ ಕ್ರಮಸಂಖ್ಯೆ (೧) ರಲ್ಲಿ ಓದಲಾಗುವ ತೀರ್ಮಾನವನ್ನು ವಿರೋಧಿಸುವಂತಹ/ಅಲ್ಲಗಳೆಯುವಂತಹ ಯಾವುದೇ ದಾಖಲೆಗಳನ್ನು ಹಾಜರುಪಡಿಸದೆ ಸಂಬಂಧಪಟ್ಟ ತೀರ್ಮಾನವು ಕಾಯ್ದೆ ಮತ್ತು ಸಂಗತಿಯನುಸಾರ ಇಲ್ಲವೆಂದು, ರಾಜೀನಾಮೆ ನೀಡಿದ ದಿನಾಂಕದವರೆಗೆ ಸಂಪೂರ್ಣ ವೇತನದ ಹಣವನ್ನು ನೀಡುವಂತೆ ಕೋರಿರುತ್ತಾರೆ.

೩. ಶ್ರೀ ಎನ್.ಎನ್.ಧಾರವಾಡಕರ್ ಇವರ ವಿರುದ್ದದ ಆರು ಆರೋಪಗಳು ರುಜುವಾತಾಗಿರುವ ಬಗ್ಗೆ ವಿವರವಾದ ತೀರ್ಮಾನವನ್ನು ಮೇಲೆ ಕ್ರಮಸಂಖ್ಯೆ (೧) ರಲ್ಲಿ ಓದಲಾಗುವ ತೀರ್ಮಾನದಡಿಯಲ್ಲಿ ದಾಖಲಿಸಲಾಗಿದ್ದು, ಸದರಿ ತೀರ್ಮಾನವನ್ನು ವಿರೋಧಿಸುವಂತಹ/ಅಲ್ಲಗಳೆಯುವಂತಹ ಯಾವುದೇ ದಾಖಲೆಗಳು/ಹೇಳಿಕೆಗಳು ಶ್ರೀ ಎನ್.ಎನ್.ಧಾರವಾಡಕರ್ ಅವರಿಂದ ನಿಗಧಿತ ಕಾಲಾವಧಿಯೊಳಗೆ ಸಲ್ಲಿಸಲ್ಪಡದೆ ಇರುವುದರಿಂದ, ಶ್ರೀ ಎನ್.ಎನ್.ಧಾರವಾಡಕರ್ ಇವರು ಮೇಲೆ ಕ್ರಮಸಂಖ್ಯೆ (೧) ರಲ್ಲಿ ಓದಲಾಗುವ ತೀರ್ಮಾನದಡಿಯಲ್ಲಿ ಶಿಕ್ಷೆಗೆ ಗುರಿಯಾಗಲು ಮತ್ತು ವೇತನವನ್ನು ಪಡೆಯಲು ಅನರ್ಹರಿರುತ್ತಾರೆಯೇ ಹೊರತು ಅನಧಿಕೃತ ಗೈರು ಹಾಜರಾಗಿದ್ದ ಅವಧಿಗೂ ವೇತನವನ್ನು ಪಡೆಯಲು ಯಾವುದೇ ಸಂದರ್ಭದಲ್ಲೂ ಅರ್ಹರಿರುವುದಿಲ್ಲ.

೪. ಮೇಲೆ ಕ್ರಮಸಂಖ್ಯೆ (೧) ರಲ್ಲಿ ಓದಲಾಗುವ ತೀರ್ಮಾನದಡಿಯಲ್ಲಿ ಶ್ರೀ ಎನ್.ಎನ್.ಧಾರವಾಡಕರ್ ಇವರು ಬಾಗಲಕೋಟೆ ಜಿಲ್ಲಾ ವೇದಿಕೆಯ ಕರ್ತವ್ಯಕ್ಕೆ ಹಾಜರಾದ ಹಾಗೂ ಕಲಾಪ ಜರುಗಿಸಿದ ದಿನಾಂಕಗಳು ಮತ್ತು ಅನಧೀಕೃತವಾಗಿ ಕೇಂದ್ರ ಸ್ಥಾನ ಬಿಟ್ಟಿರುವ ಅವಧಿಯು ಈ ಮುಂದಿನಂತೆ

| ಕರ್ತವ್ಯಕ್ಕೆ ಹಾಜರಾದ ಹಾಗೂ ಕಲಾಪ ಜರುಗಿಸಿದ ದಿನಾಂಕಗಳು | | ಅನಧಿಕೃತ ಗೈರುಹಾಜರಾಗಿದ್ದ ಹಾಗೂ ಅನಧಿಕೃತವಾಗಿ ಕೇಂದ್ರ ಸ್ಥಾನ ಬಿಟ್ಟಿರುವ ಅವಧಿ | |
|---|---|---|---|
| ದಿನಾಂಕಗಳು | ಒಟ್ಟು ದಿನಗಳು | ದಿನಾಂಕಗಳು | ಒಟ್ಟು ದಿನಗಳು |
| ೧೩-೦೨-೦೪ | ೦೧ | ೧೬-೦೨-೦೪ | ೦೧ |
| ೧೭-೦೨-೦೪ | ೦೧ | ೧೯-೦೨-೦೪ರಿಂದ ೧೯-೦೩-೦೪ | ೩೦ |
| ೨೦-೦೩-೦೪ | ೦೧ | | |
| ೧೦-೦೫-೦೪ರಿಂದ ೧೪-೦೫-೦೪ರವರೆಗೆ | ೦೫ | ೨೨-೦೩-೦೪ರಿಂದ ೦೯-೦೫-೦೪ರವರೆಗೆ | ೪೯ |
| ೧೭-೦೫-೦೪ | ೦೧ | ೧೫-೦೫-೦೪ | ೦೧ |
| ೦೮-೦೬-೦೪ರಿಂದ ೧೧-೦೬-೦೪ರವರೆಗೆ | ೦೪ | ೧೮-೦೫-೦೪ರಿಂದ ೦೭-೦೬-೦೪ರವರೆಗೆ | ೨೧ |
| ೧೬-೦೬-೦೪ರಿಂದ ೧೮-೦೬-೦೪ರವರೆಗೆ | ೦೩ | ೧೪-೦೬-೦೪ರಿಂದ ೧೫-೦೬-೦೪ರವರೆಗೆ | ೦೨ |
| ೨೩-೦೬-೦೪ರಿಂದ ೨೪-೦೬-೦೪ರವರೆಗೆ | ೦೨ | ೧೮-೦೬-೦೪ರಿಂದ ೨೨-೦೬-೦೪ರವರೆಗೆ | ೦೫ |
| ೨೬-೦೬-೦೪ | ೦೧ | ೨೫-೦೬-೦೪ | ೦೧ |
| ೨೯-೦೬-೦೪ | ೦೧ | ೨೮-೦೬-೦೪ | ೦೧ |
| ೦೧-೦೭-೦೪ | ೦೧ | ೩೦-೦೬-೦೪ | ೦೧ |
| ೦೭-೦೭-೦೪ | ೦೧ | ೦೨-೦೭-೦೪ರಿಂದ ೦೬-೦೭-೦೪ರವರೆಗೆ | ೦೫ |
| ೧೫-೦೭-೦೪ | ೦೧ | ೦೮-೦೭-೦೪ರಿಂದ ೧೪-೦೭-೦೪ರವರೆಗೆ | ೦೭ |
| ೨೧-೦೭-೦೪ರಿಂದ ೨೨-೦೭-೦೪ರವರೆಗೆ | ೦೨ | ೧೬-೦೭-೦೪ರಿಂದ ೨೦-೦೭-೦೪ರವರೆಗೆ | ೦೫ |
| ೨೭-೦೭-೦೪ರಿಂದ ೨೯-೦೭-೦೪ರವರೆಗೆ | ೦೩ | ೨೩-೦೭-೦೪ರಿಂದ ೨೬-೦೭-೦೪ರವರೆಗೆ | ೦೪ |
| ೦೩-೦೮-೦೪ | ೦೧ | ೩೦-೦೭-೦೪ರಿಂದ ೦೨-೦೮-೦೪ರವರೆಗೆ | ೦೪ |
| ೦೫-೦೮-೦೪ | ೦೧ | ೦೪-೦೮-೦೪ | ೦೧ |
| ೧೧-೦೮-೦೪ರಿಂದ ೧೩-೦೮-೦೪ರವರೆಗೆ | ೦೩ | ೦೬-೦೮-೦೪ರಿಂದ ೧೦-೦೮-೦೪ರವರೆಗೆ | ೦೫ |
| ೧೭-೦೮-೦೪ರಿಂದ ೧೮-೦೮-೦೪ರವರೆಗೆ | ೦೨ | ೧೬-೦೮-೦೪ | ೦೧ |
| ೨೪-೦೮-೦೪ರಿಂದ ೨೫-೦೮-೦೪ರವರೆಗೆ | ೦೨ | ೧೯-೦೮-೦೪ರಿಂದ ೨೩-೦೮-೦೪ರವರೆಗೆ | ೦೫ |
| ೩೧-೦೮-೦೪ | ೦೧ | ೨೬-೦೮-೦೪ರಿಂದ ೩೦-೦೮-೦೪ರವರೆಗೆ | ೦೫ |
| ೦೧-೦೯-೦೪ರಿಂದ ೦೨-೦೯-೦೪ರವರೆಗೆ | ೦೨ | ೦೩-೦೯-೦೪ರಿಂದ ೦೬-೦೯-೦೪ರವರೆಗೆ | ೦೪ |
| ೦೭-೦೯-೦೪ರಿಂದ ೦೯-೦೯-೦೪ರವರೆಗೆ | ೦೩ | ೧೦-೦೯-೦೪ರಿಂದ ೧೩-೦೯-೦೪ರವರೆಗೆ | ೦೪ |
| ೧೪-೦೯-೦೪ರಿಂದ ೧೬-೦೯-೦೪ರವರೆಗೆ | ೦೩ | ೧೭-೦೯-೦೪ರಿಂದ ೨೦-೦೯-೦೪ರವರೆಗೆ | ೦೪ |
| ೨೧-೦೯-೦೪ರಿಂದ ೨೩-೦೯-೦೪ರವರೆಗೆ | ೦೩ | ೨೪-೦೯-೦೪ರಿಂದ ೨೫-೦೯-೦೪ರವರೆಗೆ | ೦೨ |
| ೨೭-೦೯-೦೪ರಿಂದ ೨೯-೦೯-೦೪ರವರೆಗೆ | ೦೩ | ೩೦-೦೯-೦೪ರಿಂದ ೦೫-೧೦-೦೪ರವರೆಗೆ | ೦೬ |
| ೦೬-೧೦-೦೪ರಿಂದ ೦೮-೧೦-೦೪ರವರೆಗೆ | ೦೩ | ೧೧-೧೦-೦೪ರಿಂದ ೨೫-೧೦-೦೪ರವರೆಗೆ | ೧೫ |
| ೨೬-೧೦-೦೪ರಿಂದ ೨೯-೧೦-೦೪ರವರೆಗೆ | ೦೪ | ೩೦-೧೦-೦೪ರಿಂದ ೦೨-೧೧-೦೪ರವರೆಗೆ | ೦೪ |
| ೦೩-೧೧-೦೪ರಿಂದ ೦೫-೧೧-೦೪ರವರೆಗೆ | ೦೩ | ೦೬-೧೧-೦೪ರಿಂದ ೧೭-೧೧-೦೪ರವರೆಗೆ | ೧೨ |
| ೧೮-೧೧-೦೪ರಿಂದ ೧೯-೧೧-೦೪ರವರೆಗೆ | ೦೨ | ೨೦-೧೧-೦೪ರಿಂದ ೨೩-೧೧-೦೪ರವರೆಗೆ | ೦೪ |
| ೨೪-೧೧-೦೪ರಿಂದ ೨೬-೧೧-೦೪ರವರೆಗೆ | ೦೩ | ೨೭-೧೧-೦೪ರಿಂದ ೩೦-೧೧-೦೪ರವರೆಗೆ | ೦೪ |
| ೦೧-೧೨-೦೪ರಿಂದ ೦೩-೧೨-೦೪ರವರೆಗೆ | ೦೩ | ೦೪-೧೨-೦೪ರಿಂದ ೦೬-೧೨-೦೪ರವರೆಗೆ | ೦೩ |

| | | | | | |
|---|---|---|---|---|---|
| ೦೭-೧೨-೦೪ರಿಂದ ೦೯-೧೨-೦೪ರವರೆಗೆ | | ೦೩ | ೧೦-೧೨-೦೪ರಿಂದ ೧೪-೧೨-೦೪ರವರೆಗೆ | | ೦೫ |
| ೧೫-೧೨-೦೪ರಿಂದ ೧೬-೧೨-೦೪ರವರೆಗೆ | | ೦೨ | ೧೭-೧೨-೦೪ರಿಂದ ೨೦-೧೨-೦೪ರವರೆಗೆ | | ೦೪ |
| ೨೧-೧೨-೦೪ರಿಂದ ೨೩-೧೨-೦೪ರವರೆಗೆ | | ೦೩ | ೨೪-೧೨-೦೪ರಿಂದ ೦೪-೦೧-೦೫ರವರೆಗೆ | | ೧೨ |
| ೦೫-೦೧-೦೫ರಿಂದ ೦೭-೦೧-೦೫ರವರೆಗೆ | | ೦೩ | ೦೮-೦೧-೦೫ರಿಂದ ೧೦-೦೧-೦೫ರವರೆಗೆ | | ೦೩ |
| ೧೧-೦೧-೦೫ರಿಂದ ೧೩-೦೧-೦೫ರವರೆಗೆ | | ೦೩ | ೧೫-೦೧-೦೫ರಿಂದ ೧೭-೦೧-೦೫ರವರೆಗೆ | | ೦೩ |
| ೧೮-೦೧-೦೫ರಿಂದ ೧೯-೦೧-೦೫ರವರೆಗೆ | | ೦೨ | ೨೦-೦೧-೦೫ರಿಂದ ೨೪-೦೧-೦೫ರವರೆಗೆ | | ೦೫ |
| ೨೫-೦೧-೦೫ | | ೦೧ | ೦೨-೦೨-೦೫ | | ೦೧ |
| ೨೭-೦೧-೦೫ರಿಂದ ೨೯-೦೧-೦೫ರವರೆಗೆ | | ೦೩ | ೦೪-೦೨-೦೫ರಿಂದ ೦೮-೦೨-೦೫ರವರೆಗೆ | | ೦೫ |
| ೩೧-೦೧-೦೫ | | ೦೧ | ೧೧-೦೨-೦೫ರಿಂದ ೧೪-೦೨-೦೫ರವರೆಗೆ | | ೦೪ |
| ೦೧-೦೨-೦೫ | | ೦೧ | ೧೮-೦೨-೦೫ರಿಂದ ೨೧-೦೨-೦೫ರವರೆಗೆ | | ೦೪ |
| ೦೩-೦೨-೦೫ | | ೦೧ | ೨೫-೦೨-೦೫ರಿಂದ ೦೧-೦೩-೦೫ರವರೆಗೆ | | ೦೫ |
| ೦೯-೦೨-೦೫ರಿಂದ ೧೦-೦೨-೦೫ರವರೆಗೆ | | ೦೨ | ೦೪-೦೩-೦೫ರಿಂದ ೧೪-೦೩-೦೫ರವರೆಗೆ | | ೧೧ |
| ೧೫-೦೨-೦೫ರಿಂದ ೧೭-೦೨-೦೫ರವರೆಗೆ | | ೦೩ | ೧೮-೦೩-೦೫ರಿಂದ ೨೧-೦೩-೦೫ರವರೆಗೆ | | ೦೪ |
| ೨೨-೦೨-೦೫ರಿಂದ ೨೪-೦೨-೦೫ರವರೆಗೆ | | ೦೩ | ೨೬-೦೩-೦೫ರಿಂದ ೨೯-೦೩-೦೫ರವರೆಗೆ | | ೦೪ |
| ೦೨-೦೩-೦೫ರಿಂದ ೦೩-೦೩-೦೫ರವರೆಗೆ | | ೦೨ | ೩೧-೦೩-೦೫ರಿಂದ ೦೩-೦೪-೦೫ರವರೆಗೆ | | ೦೪ |
| ೧೫-೦೩-೦೫ರಿಂದ ೧೭-೦೩-೦೫ರವರೆಗೆ | | ೦೩ | ೦೮-೦೪-೦೫ರಿಂದ ೧೧-೦೪-೦೫ರವರೆಗೆ | | ೦೪ |
| ೨೨-೦೩-೦೫ರಿಂದ ೨೪-೦೩-೦೫ರವರೆಗೆ | | ೦೩ | ೧೩-೦೪-೦೫ರಿಂದ ೧೮-೦೪-೦೫ರವರೆಗೆ | | ೦೬ |
| ೩೦-೦೩-೦೫ | | ೦೧ | ೨೧-೦೪-೦೫ರಿಂದ ೨೮-೦೪-೦೫ರವರೆಗೆ | | ೦೮ |
| ೦೪-೦೪-೦೫ರಿಂದ ೦೭-೦೪-೦೫ರವರೆಗೆ | | ೦೪ | ೩೦-೦೪-೦೫ರಿಂದ ೦೨-೦೫-೦೫ರವರೆಗೆ | | ೦೩ |
| ೧೨-೦೪-೦೫ | | ೦೧ | ೦೬-೦೫-೦೫ | | ೦೧ |
| ೧೯-೦೪-೦೫ | | ೦೧ | ೦೯-೦೫-೦೫ರಿಂದ ೧೬-೦೫-೦೫ರವರೆಗೆ | | ೦೮ |
| ೨೦-೦೪-೦೫ | | ೦೧ | ೧೯-೦೫-೦೫ರಿಂದ ೨೪-೦೫-೦೫ರವರೆಗೆ | | ೦೬ |
| ೨೯-೦೪-೦೫ | | ೦೧ | ೨೬-೦೫-೦೫ರಿಂದ ೩೧-೦೫-೦೫ರವರೆಗೆ | | ೦೬ |
| ೦೩-೦೫-೦೫ರಿಂದ ೦೫-೦೫-೦೫ | | ೦೩ | ೦೪-೦೬-೦೫ರಿಂದ ೦೩-೦೭-೦೫ರವರೆಗೆ | | ೩೦ |
| ೦೭-೦೫-೦೫ | | ೦೧ | ೦೪-೦೭-೦೫ರಿಂದ ೦೮-೦೭-೦೫ರವರೆಗೆ | | ೦೫ |
| ೧೭-೦೫-೦೫ರಿಂದ ೧೮-೦೫-೦೫ರವರೆಗೆ | | ೦೨ | | | |
| ೨೫-೦೫-೦೫ | | ೦೧ | | | |
| ೦೧-೦೬-೦೫ರಿಂದ ೦೩-೦೬-೦೫ರವರೆಗೆ | | ೦೩ | | | |
| ಒಟ್ಟು | | ೧೨೮ | ಒಟ್ಟು | | ೩೬೭ |
| ೦೯.೦೭.೦೫ ರಿಂದ ೧೦.೦೭.೨೦೦೫ರ ಸಾರ್ವತ್ರಿಕ ರಜಾ ದಿನಗಳು | ೦೨ | | ೦೮.೦೯.೦೬ ರಿಂದ ೦೯.೦೯.೦೬ | ೦೨ | |
| ೧೧.೦೭.೦೫ ರಿಂದ ೩೧.೦೭.೦೫ | ೨೧ | | ೨೪.೧೦.೦೫ ರಿಂದ ೦೬.೧೧.೦೫ | ೧೪ | |
| ೦೧.೦೯.೦೫ ರಿಂದ ೦೭.೦೯.೦೫ | ೦೭ | | | | |
| ೧೦.೦೯.೦೫ ರಿಂದ ೩೦.೦೯.೦೫ | ೨೧ | | | | |
| ೦೧.೧೦.೦೫ ರಿಂದ ೨೨.೧೦.೦೫ | ೨೨ | | | | |
| ೦೭.೧೧.೦೫ ರಿಂದ ೦೮.೧೧.೦೫ | ೦೨ | | | | |
| ಒಟ್ಟು | | ೭೫ | | | ೧೬ |
| **Grand Total** | | ೨೦೩ | | | ೩೮೩ |

ಇರುವುದರಿಂದ ಹಾಗೂ ಮೇಲೆ ಕ್ರಮಸಂಖ್ಯೆ (೧) ರಲ್ಲಿ ಓದಲಾಗುವ ತೀರ್ಮಾನದ ಉದ್ಧೃತ ಭಾಗವು ಈ ಮುಂದಿನಂತೆ

ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ರ ಕಲಂ ೨೪-ಬಿ ರಡಿಯಲ್ಲಿ ದತ್ತವಾಗಿರುವ ಅಧಿಕಾರದಡಿಯಲ್ಲಿ, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಆದೇಶ ಸಂಖ್ಯೆ ಕರಾಆ/ಆಡಳಿತ/೨೦/೨೦೦೫ ದಿನಾಂಕ ೧೭.೧೦.೨೦೦೫ ಇದನ್ನು ಹಿಂತೆಗೆದುಕೊಂಡು ಮೇಲಿನ ಕಂಡಿಕೆಯಲ್ಲಿ ದಾಖಲಿಸಿರುವಂತೆ ಕಾರ್ಯನಿರ್ವಹಿಸಿರುವ ಅವಧಿಯಾದ ಒಟ್ಟು ೨೦೩ ದಿನಗಳಿಗೆ ಸಂಬಂಧಿಸಿದಂತೆ ವೇತನವನ್ನು ನೀಡುವ ಬಗ್ಗೆ ಮತ್ತು ೩೮೩ ದಿನಗಳಿಗೆ ಸಂಬಂಧಿಸಿದಂತೆ ವೇತನವನ್ನು ನೀಡದಿರುವ ಬಗ್ಗೆ ಆದೇಶವನ್ನು ಹೊರಡಿಸಲು ಈ ಮೂಲಕ ತೀರ್ಮಾನಿಸಲಾಗಿದೆ. ಈಗಾಗಲೇ ದಿನಾಂಕ ೧೩.೦೨.೨೦೦೪ರಿಂದ ದಿನಾಂಕ ೩೦.೦೬.೨೦೦೪ರವರೆಗೆ ಪಾವತಿ ಮಾಡಿರುವ ವೇತನವನ್ನು ದಿನಾಂಕ ೧೩.೦೨.೨೦೦೪ರಿಂದ ೦೮.೧೧.೨೦೦೫ರವರೆಗಿನ ಅವಧಿಯಲ್ಲಿ ಕಾರ್ಯನಿರ್ವಹಿಸಿರುವ ಒಟ್ಟು ಅವಧಿಯಾದ ೨೦೩ ದಿನಗಳಿಗೆ ಎದುರಾಗಿ ದಿನಾಂಕ ೧೩.೦೨.೨೦೦೪ರಿಂದ ದಿನಾಂಕ ೩೦.೦೬.೨೦೦೪ರವರೆಗಿನ ಅವಧಿಯಲ್ಲಿ ಈಗಾಗಲೇ ೧೩೯ ದಿನಗಳಿಗೆ ಸಂಬಂಧಿಸಿದಂತೆ ವೇತನವನ್ನು ಡ್ರಾ ಮಾಡಿ ವಿತರಿಸಿರುವುದರಿಂದ, ನಂತರದ ಅವಧಿಯಲ್ಲಿ ಇನ್ನು ಬಾಕಿ ೬೪ ದಿನಗಳಿಗೆ ಮಾತ್ರ ವೇತನವನ್ನು ಡ್ರಾ ಮಾಡಿ ವಿತರಿಸಬೇಕಾಗಿರುವುದರಿಂದ, ಈ ೬೪ ದಿನಗಳಿಗೆ ಮಾತ್ರ ವೇತನವನ್ನು ಡ್ರಾ ಮಾಡಿ ಶ್ರೀ ಎನ್.ಎನ್.ಧಾರವಾಡಕರ್, ಹಿಂದಿನ ಅಧ್ಯಕ್ಷರು, ಬಾಗಲಕೋಟೆ ಜಿಲ್ಲಾ ವೇದಿಕೆ ಇವರಿಗೆ ವಿತರಿಸುವ ಸಲುವಾಗಿ ಪೇ ಸ್ಲಿಪ್ ಅನ್ನು ನೀಡುವ ಬಗ್ಗೆ ಕರ್ನಾಟಕ ಮಹಾಲೇಖಪಾಲರ ಕಾರ್ಯಾಲಯಕ್ಕೆ ಪ್ರಸ್ತಾವನೆಯನ್ನು ಕಳುಹಿಸುವ

ಬಗ್ಗೆ ತೀರ್ಮಾನಿಸಲಾಗಿದೆ. ಮೇಲಿನ ಕಂಡಿಕೆಯಲ್ಲಿ ದಾಖಲಿಸಿರುವಂತೆ ಆಯಾಯ ದಿನಾಂಕಗಳಂತೆ ೨೦೩ ದಿನಗಳನ್ನು ಮಾತ್ರ ಕರ್ತವ್ಯದಲ್ಲಿದ್ದ ದಿನಗಳೆಂದು ಮತ್ತು ೩೮೩ ದಿನಗಳನ್ನು ಕರ್ತವ್ಯದಲ್ಲಿಲ್ಲದ ದಿನಗಳೆಂದು/ಅವಧಿಯೆಂದು ತೀರ್ಮಾನಿಸಿದೆ.

ಎಂದು ಓದಲಾಗಿರುವುದನ್ನು ಅನುಸರಿಸಿಕೊಂಡು ಈ ಮೇಲಿನ ತೀರ್ಮಾನವನ್ನು ಅಲ್ಲಗಳೆಯಲು ಅಥವಾ ವಿರೋಧಿಸುವಂತಹ ಯಾವುದೇ ದಾಖಲೆಗಳು ಶ್ರೀ ಎನ್.ಎನ್.ಧಾರವಾಡಕರ್ ಅವರಿಂದ ನಿಗಧಿತ ಕಾಲಾವಧಿಯೊಳಗೆ ಸಲ್ಲಿಸಲ್ಪಟ್ಟಿಲ್ಲವಾದ್ದರಿಂದ ಈ ಕೆಳಕಂಡ ಆದೇಶ ಮಾಡಲಾಗಿದೆ.

ಆದೇಶ ಸಂಖ್ಯೆ ಕರಾಆ/ಆಡಳಿತ/೨೦/೨೦೦೫, ದಿನಾಂಕ ೩೧ನೇ ಆಗಸ್ಟ್ ೨೦೦೬

ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯ ಇಲಾಖಾ ಮುಖ್ಯಸ್ಥನಾದ ಹಾಗೂ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧ್ಯಕ್ಷನಾದ ನ್ಯಾಯಮೂರ್ತಿ ಚಂದ್ರಶೇಖರಯ್ಯ ಆದ ನನಗೆ, ಗ್ರಾಹಕ ಸಂರಕ್ಷಣ ಕಾಯ್ದೆ ೧೯೮೬ ರ ಕಲಂ ೨೪-ಬಿ ರಡಿಯಲ್ಲಿ ದತ್ತವಾಗಿರುವ ಅಧಿಕಾರದನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ ಎಫ್‌ಡಿ ೧ ಟಿಎಫ್‌ಪಿ ೨೦೦೧ ದಿನಾಂಕ ೦೨.೦೨.೨೦೦೧ ರನ್ವಯ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ, ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬, ಕರ್ನಾಟಕ ಗ್ರಾಹಕ ಸಂರಕ್ಷಣಾ ನಿಯಮಗಳು ೧೯೮೮ ಮತ್ತು ಮೇಲೆ ಓದಲಾಗುವ ಸರ್ಕಾರದ ಆದೇಶ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳನ್ವಯ ಶ್ರೀ ಎನ್.ಎನ್.ಧಾರವಾಡಕರ್ ಇವರು ರಾಜ್ಯ ಆಯೋಗದ ದಿನಾಂಕ ೨೨.೧೦.೨೦೦೫ ರ ತಿಳುವಳಿಕೆಯೊಂದಿಗೆ ಜಾರಿ ಮಾಡಲಾಗಿರುವ ಆರೋಪಗಳನ್ನು ಎಸಗಿರುವುದು ನಿಸ್ಸಂದೇಹವಾಗಿ ಸಕಾರಾತ್ಮಕವಾಗಿ ರುಜುವಾತಾಗಿರುವ ಪ್ರಯುಕ್ತ ಶ್ರೀ ಎನ್.ಎನ್.ಧಾರವಾಡಕರ್ ಇವರು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ವೃಂದದ ನ್ಯಾಯಾಧೀಶರಾಗಿದ್ದು, ದಿನಾಂಕ ೩೦.೦೬.೨೦೦೪ ರಂದು ಸದರಿ ವೃಂದದಿಂದ ನಿವೃತ್ತರಾಗಿರುವವರಾಗಿರುವುದರಿಂದ ಹಾಗೂ ದಿನಾಂಕ ೦೯.೧೧.೨೦೦೫ ರ ಪೂರ್ವಾಹ್ನದಿಂದ ಜಾರಿಗೆ ಬರುವಂತೆ ಬಾಗಲಕೋಟೆ ಜಿಲ್ಲಾ ವೇದಿಕೆಯ ಅಧ್ಯಕ್ಷರ ಸ್ಥಾನಕ್ಕೆ ರಾಜೀನಾಮೆಯನ್ನು ನೀಡಿರುವ ಪ್ರಯುಕ್ತ, ಸದರಿಯವರನ್ನು ಕಾಲಿಕ ಸೇವೆಯಿಂದ ವಜಾಗೊಳಿಸುವ ಸಂದರ್ಭ ಸಧ್ಯ ಉದ್ಭವವಾಗಿಲ್ಲದೇ ಇರುವುದರಿಂದ, ಕರ್ತವ್ಯಕ್ಕೆ ಹಾಜರಾದ ಅವಧಿಗೆ ವೇತನವನ್ನು ನೀಡಿ, ಕರ್ತವ್ಯಕ್ಕೆ ಹಾಜರಾಗಿಲ್ಲದ ಮತ್ತು ಅನಧಿಕೃತ ಗೈರು ಹಾಜರಾದ ಅವಧಿಗೆ ಮಾತ್ರ ವೇತನವನ್ನು ನೀಡದಿರುವುದು ನ್ಯಾಯೋಚಿತವಾಗಿರುವ ಪ್ರಯುಕ್ತ ಮೇಲೆ ಪ್ರಸ್ತಾವನೆಯ ಕಂಡಿಕೆ (೦೪) ರಲ್ಲಿ ದಾಖಲಿಸಿರುವ ಅವಧಿಯಂತೆ ೨೦೩ ದಿನಗಳಿಗೆ ಮಾತ್ರ ವೇತನವನ್ನು ಶ್ರೀ ಎನ್.ಎನ್.ಧಾರವಾಡಕರ್‌ರವರು ಪಡೆಯಲು ಅರ್ಹರಿರುತ್ತಾರೆಂದು ಇನ್ನುಳಿದ ೩೮೩ ದಿನಗಳಿಗೆ ವೇತನವನ್ನು ಪಡೆಯಲು ಅರ್ಹರಿರುವುದಿಲ್ಲವೆಂದು ಈ ಮೂಲಕ ಘೋಷಿಸಲಾಗಿದೆ.

ಈ ಆದೇಶದ ಮತ್ತು ಮೇಲೆ ಕ್ರಮಸಂಖ್ಯೆ (೧) ರಲ್ಲಿ ಓದಲಾಗುವ ತೀರ್ಮಾನದ ಪ್ರತಿಯ ಆಧಾರದ ಮೇರೆಗೆ ಕರ್ನಾಟಕ ಮಹಾಲೇಖಪಾಲರ ಕಾರ್ಯಾಲಯವು ನೀಡುವ ಪೇ ಸ್ಲಿಪ್‌ನ್ನು ಅನುಸರಿಸಿಕೊಂಡು ಈಗಾಗಲೇ ದಿನಾಂಕ ೧೩.೦೨.೨೦೦೪ ರಿಂದ ದಿನಾಂಕ ೩೦.೦೬.೨೦೦೪ ರವರೆಗೆ ನಿರಂತರವಾಗಿ (ಅನಧಿಕೃತ ಗೈರು ಹಾಜರಿಯಲ್ಲಿ ಇದ್ದ ಅವಧಿಗೂ ಸೇರಿದಂತೆ) ೧೩೯ ದಿನಗಳಿಗೆ ವಿತರಣೆ ಮಾಡಿರುವ ವೇತನವನ್ನು ದಿನಾಂಕ ೦೧.೦೭.೨೦೦೪ ರ ನಂತರದ ಅವಧಿಯಲ್ಲಿನ ಕರ್ತವ್ಯಕ್ಕೆ ಹಾಜರಾದ ದಿನಗಳ ವೇತನಕ್ಕೆ ಸರಿದೂಗಿಸಿಕೊಂಡು, ಇನ್ನು ಬಾಕಿ ಉಳಿಯುವ ಕರ್ತವ್ಯದಲ್ಲಿ ೬೪ ದಿನಗಳಿಗೆ ಮಾತ್ರ ವೇತನ ಡ್ರಾ ಮಾಡಿ ಶ್ರೀ ಎನ್.ಎನ್.ಧಾರವಾಡಕರ್‌ರವರಿಗೆ ವಿತರಿಸಲು ಬಾಗಲಕೋಟೆ ಜಿಲ್ಲಾ ವೇದಿಕೆಯ ವೇತನ ಬಟವಾಡೆ ಅಧಿಕಾರಿಗಳು ಕ್ರಮವಹಿಸುವುದು.

ರಾಜ್ಯ ಆಯೋಗದ ಆದೇಶ ಸಂಖ್ಯೆ ಕರಾಆ/ಆಡಳಿತ/೨೦/೨೦೦೫ ದಿನಾಂಕ ೧೭.೧೦.೨೦೦೫ ಇದನ್ನು ಈ ಮೂಲಕ ಹಿಂತೆಗೆದುಕೊಳ್ಳಲಾಗಿದೆ.

ನ್ಯಾಯಮೂರ್ತಿ ಚಂದ್ರಶೇಖರಯ್ಯ
ಅಧ್ಯಕ್ಷರು
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
ಬೆಂಗಳೂರು.

ಪಿ.ಆರ್. 1331

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ
ಬಸವಭವನ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧.

ಪ್ರಕಟಣೆ ಸಂಖ್ಯೆ : ಕರಾಆ/ಆಡಳಿತ/೦೬/೨೦೦೬, ದಿನಾಂಕ ೩೧ನೇ ಆಗಸ್ಟ್ .೨೦೦೬

ವಿಷಯ : ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ರ ಕಲಂ ೧೦(೧ಎ) ರಡಿಯಲ್ಲಿ ಜಿಲ್ಲಾ ವೇದಿಕೆಯ ಸದಸ್ಯರ ಆಯ್ಕೆ ಬಗ್ಗೆ.
ಉಲ್ಲೇಖ : ರಾಜ್ಯ ಆಯೋಗದ ಸಮಸಂಖ್ಯೆಯ ಪತ್ರ ದಿನಾಂಕ ೧೬.೦೮.೨೦೦೬

ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬(ಕೇಂದ್ರ ಕಾಯ್ದೆ ಸಂಖ್ಯೆ ೬೮/೧೯೮೬)ರಡಿಯಲ್ಲಿ ರಚಿತಗೊಂಡು ಗ್ರಾಹಕರ ವ್ಯಾಜ್ಯಗಳನ್ನು ಇತ್ಯರ್ಥಪಡಿಸುತ್ತಿರುವ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಇದರ ಸದಸ್ಯರ ಸ್ಥಾನವು ದಿನಾಂಕ ೦೪.೦೮.೨೦೦೬ರಿಂದ ಖಾಲಿ ಇದ್ದು, ಸದರಿ ಸ್ಥಾನಕ್ಕೆ ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ರ ಕಲಂ ೧೦(೧)(ಬಿ)ರನುಸಾರ ಈ ಮುಂದಿನ ಅರ್ಹತೆಯನ್ನೊಳಗೊಂಡ ಅಭ್ಯರ್ಥಿಗಳು ಆಯ್ಕೆ ಬಯಸಿ ನಿಗಧಿತ ಅರ್ಜಿ ನಮೂನೆಯಲ್ಲಿ ಶಿವಮೊಗ್ಗ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಶಾಂತ ಮ್ಯಾನ್ಷನ್, ೧ನೇ ಮಹಡಿ, ಗಾಂಧಿ ನಗರ ಮುಖ್ಯ ರಸ್ತೆ, ಶಿವಮೊಗ್ಗ-೫೭೭ ೨೦೧, ಇಲ್ಲಿಂದ ಶುಲ್ಕವನ್ನು ಪಾವತಿ ಮಾಡುವ ಮೂಲಕ ಪಡೆದುಕೊಂಡು ಭರ್ತಿ ಮಾಡಿದ ಅರ್ಜಿಗಳನ್ನು ಅಗತ್ಯ ದಾಖಲೆಗಳ ದೃಢೀಕೃತ ಪ್ರತಿಗಳೊಂದಿಗೆ ದಿನಾಂಕ ೩೦.೦೯.೨೦೦೬ರ ಸಂಜೆ ೫-೦೦ ಘಂಟೆಯೊಳಗೆ ಶಿವಮೊಗ್ಗ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಶಾಂತ ಮ್ಯಾನ್ಷನ್, ೧ನೇ ಮಹಡಿ, ಗಾಂಧಿನಗರ ಮುಖ್ಯ ರಸ್ತೆ, ಶಿವಮೊಗ್ಗ, ಇಲ್ಲಿಗೆ ಸಲ್ಲಿಸುವುದು.

ಸದಸ್ಯರಾಗಿ ಆಯ್ಕೆ ಹೊಂದಲು ಇರುವ ನಿಗಧಿತ ವಿದ್ಯಾರ್ಹತೆಗಳು

೧. ಅರ್ಜಿ ಸಲ್ಲಿಸುವ ದಿನಾಂಕಕ್ಕೆ ೩೫ ವರ್ಷ ವಯಸ್ಸು ಮೀರಿರಬೇಕು ಹಾಗೂ ೬೦ ವರ್ಷ ವಯಸ್ಸು ಮೀರಿರಬಾರದು.

೨. ಅಂಗೀಕೃತ ವಿಶ್ವವಿದ್ಯಾನಿಲಯದಲ್ಲಿ ಯಾವುದಾದರು ವಿಷಯದಲ್ಲಿ ಪದವೀದರರಾಗಿರಬೇಕು.

೩. ಕಾನೂನು/ಆರ್ಥಿಕ/ವಾಣಿಜ್ಯ/ಕೈಗಾರಿಕೆ/ಸಾರ್ವಜನಿಕ ಆಡಳಿತ/ಸಾರ್ವಜನಿಕ ವ್ಯವಹಾರಗಳು/ಲೆಕ್ಕ, ಇವುಗಳಿಗೆ ಸಂಬಂಧಿಸಿದ ವಿಷಯಗಳಲ್ಲಿ ಇತ್ಯರ್ಥಪಡಿಸಿರುವ ಕನಿಷ್ಠ ೧೦ ವರ್ಷಗಳ ಅನುಭವವನ್ನು ಹೊಂದಿರುವ ಜೊತೆಗೆ ನ್ಯಾಯವಾಗಿ, ಯೋಗ್ಯ ನಿಷ್ಠೆ ಪ್ರಾಮಾಣಿಕತೆ ಮತ್ತು ಗಣ್ಯತೆಯನ್ನು ಹೊಂದಿದವರಾಗಿರಬೇಕು.

ಶಿವಮೊಗ್ಗ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರು ಅರ್ಹ ಅಭ್ಯರ್ಥಿಗಳಿಗೆ ಮಾತ್ರ ನಿಗಧಿತ ಅರ್ಜಿ ನಮೂನೆಯನ್ನು ರೂ.೧೦/- ಶುಲ್ಕವನ್ನು ಪಡೆದುಕೊಂಡು ಜೆರಾಕ್ಸ್ ಪ್ರತಿಗಳನ್ನು ಅಭ್ಯರ್ಥಿಗಳಿಗೆ ಒದಗಿಸುವುದು. ಹೀಗೆ ಸಂಗ್ರಹವಾದ ಶುಲ್ಕವನ್ನು Consumer Protection Regulation ೨೦೦೫ ರ ಅನುಸಾರ ದೃಢೀಕೃತ ಪ್ರತಿಗಳನ್ನು ನೀಡುವಾಗ ಸಂಗ್ರಹವಾದ ಶುಲ್ಕವನ್ನು ಡೆಪಾಸಿಟ್ ಮಾಡುವ ರೀತಿಯಲ್ಲಿ ರಾಜ್ಯ ಲೆಕ್ಕ ಸ್ವೀಕೃತಿ ಶೀರ್ಷಿಕೆ ಸಂಖ್ಯೆ ೧೪೫೬-೦೦-೮೦೦-೦-೦೧ ಇದಕ್ಕೆ ಜಮಾ ಮಾಡುವುದು.

ದಿನಾಂಕ ೩೦.೯.೨೦೦೬ರ ಸಂಜೆ ೫-೦೦ ಘಂಟೆಯೊಳಗೆ ಸ್ವೀಕರಿಸಿದ ಲಕೋಟೆಗಳನ್ನು ಯಥಾಸ್ಥಿತಿಯಲ್ಲಿಯೇ ರಾಜ್ಯ ಆಯೋಗಕ್ಕೆ ಮರು ದಿನವೇ ಸಲ್ಲಿಸುವುದು.

ನ್ಯಾಯಮೂರ್ತಿ ಚಂದ್ರಶೇಖರಯ್ಯ
ಅಧ್ಯಕ್ಷರು
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
ಬೆಂಗಳೂರು.

ಪಿ.ಆರ್. 1332

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರ ನಡವಳಿಕೆಗಳು.

**ಸಂಖ್ಯೆ : ಡಿಆರ್‌ಬಿ /ಆರ್ /ರದ್ದತಿ /3/2006-07, ದಿನಾಂಕ: 18ನೇ ಆಗಸ್ಟ್ 2006**

**ವಿಷಯ:** ಹಾಲು ಉತ್ಪಾದಕರ ಸಹಕಾರ ಸಂಘ ನಿ, ಬೈರಾಪಟ್ಟಣ, ಚನ್ನಪಟ್ಟಣ ತಾಲ್ಲೂಕು ಇದರಲ್ಲಿ ಜರುಗಿದ ಅವ್ಯವಹಾರಗಳ ಕುರಿತು ಆಡಳಿತ ಮಂಡಳಿಯು ಮೇಲಿಂದ ಮೇಲೆ ಲೋಪದೋಷಗಳನ್ನು ಮುಂದುವರಿಸುತ್ತಿದ್ದು ಇದರಿಂದಾಗಿ ಆಡಳಿತ ಮಂಡಳಿಯನ್ನು ರದ್ದುಗೊಳಿಸುವ ಕುರಿತು.

**ಉಲ್ಲೇಖ:** 1 ಈ ಕಛೇರಿಯ ಕಾರಣ ಕೇಳುವ ನೋಟೀಸು ಸಮ ಸಂಖ್ಯೆ ದಿ:1-6-2006.

2 ಆಡಳಿತ ಮಂಡಳಿ ಸದಸ್ಯರು, ಬೈರಾಪಟ್ಟಣ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಬೈರಾಪಟ್ಟಣ, ಚನ್ನಪಟ್ಟಣ ತಾ: ಇವರ ಉತ್ತರ ಈ ಕಾರ್ಯಾಲಯದಲ್ಲಿ ಸ್ವಿಕೃತವಾದ ದಿನಾಂಕ:26-6-2006.

**ಪೀಠಿಕೆ:-**

ಬೈರಾಪಟ್ಟಣ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಬೈರಾಪಟ್ಟಣ, ಚನ್ನಪಟ್ಟಣ ತಾ: ಇದರ ಸದಸ್ಯರು ಸಂಘದಲ್ಲಿ ನಡೆದಿದೆ ಎಂದು ಹೇಳಲಾದ ಅವ್ಯವಹಾರಗಳ ಕುರಿತು ದಿನಾಂಕ:27-5-2006 ರಂದು ದೂರು ಅರ್ಜಿಯನ್ನು ಸಲ್ಲಿಸಿರುತ್ತಾರೆ. ಈ ದೂರು ಅರ್ಜಿಗೆ 74 ಜನರು ಸಹಿ ಮಾಡಿದ್ದು, ಇರುತ್ತದೆ. ಈ ದೂರು ಅರ್ಜಿಯ ಸತ್ಯಾಂಶವನ್ನು ವರದಿ ಮಾಡುವಂತೆ ಸಹಕಾರಿ ಅಭಿವೃದ್ಧಿ ಅಧಿಕಾರಿ, ಚನ್ನಪಟ್ಟಣ ಇವರಿಗೆ ಸೂಚಿಸಿ, ಸದರಿ ವರದಿಯನ್ನು ಸಹಾಯಕ ನಿಬಂಧಕರು, ರಾಮನಗರ ಉಪವಿಭಾಗ, ರಾಮನಗರ, ಇವರ ಮುಖಾಂತರ ಸಲ್ಲಿಸಲು ನಿರ್ದೇಶಿಸಲಾಗಿತ್ತು. ಈ ವರದಿಯ ಆಧಾರದ ಮೇಲಿಂದ ಬೈರಾಪಟ್ಟಣ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಬೈರಾಪಟ್ಟಣ, ಚನ್ನಪಟ್ಟಣ ತಾ: ಇದರ ಆಡಳಿತ ಮಂಡಳಿ ಸದಸ್ಯರಿಗೆ ಉಲ್ಲೇಖ 1ರಲ್ಲಿ ನಮೂದಿಸಿದ ಕಾರಣ ಕೇಳುವ ನೋಟೀಸನ್ನು ವೈಯಕ್ತಿಕವಾಗಿ ಜಾರಿ ಮಾಡಿದ್ದು, ಇರುತ್ತದೆ. ಈ ಕಾರಣ ಕೇಳುವ ನೋಟೀಸಿಗೆ ಸಂಘದ ಅಧ್ಯಕ್ಷರು ರಚನಾತ್ಮಕವಾಗಿ ಹಾಗೂ ಪರಿಣಾಮಕಾರಿಯಾಗಿ ಸಮಜಾಯಿಷಿ ಸಲ್ಲಿಸಲು ಕೆಲವು ದಾಖಲೆಗಳ ದೃಢೀಕೃತ ನಕಲುಗಳನ್ನು ಪೂರೈಸಬೇಕೆಂದು ವಿನಂತಿಸಿಕೊಂಡಿದ್ದರ ಪ್ರಕಾರ ಅವರ ಬೇಡಿಕೆಯಂತೆ ಕೇಳಿದ ಎಲ್ಲಾ ದಾಖಲಾತಿಗಳ ದೃಡೀಕೃತ ನಕಲುಗಳನ್ನು ಪೂರೈಸಲಾಗಿರುತ್ತದೆ.

ಉಲ್ಲೇಖ(1)ರ ಕಾರಣ ಕೇಳುವ ನೋಟೀಸಿಗೆ ಅಧ್ಯಕ್ಷರು ಹಾಗೂ ಉಳಿದ ಆಡಳಿತ ಮಂಡಳಿ ಸದಸ್ಯರು ಸಾಮೂಹಿಕವಾಗಿ ಉಲ್ಲೇಖ(2)ರಲ್ಲಿ ನಮೂದಿಸಿರುವ ಸಮಜಾಯಿಷಿಯನ್ನು ಕೊಟ್ಟಿರುತ್ತಾರೆ. ಈ ಸಮಜಾಯಿಷಿಯನ್ನು ಉಲ್ಲೇಖ(1)ರಲ್ಲಿ ನಮೂದಿಸಿರುವ ಕಾರಣ ಕೇಳುವ ನೋಟೀಸಿನಲ್ಲಿ ರೂಪಿಸಲಾದ ಆರೋಪಗಳನ್ವಯ ಪ್ರತ್ಯೇಕವಾಗಿ ಪರಿಶೀಲಿಸಲಾಗಿದೆ. ಅವುಗಳ ವಿವರ ಈ ಕೆಳಗಿನಂತೆ ಇರುತ್ತದೆ:

**ಆರೋಪ - 1 :-**

ಕರ್ನಾಟಕ ಸಹಕಾರ ಸಂಘಗಳ 1959ನೇ ಇಸವಿಯ ಅಧಿನಿಯಮ 27 ರ ಪ್ರಕಾರ ವಾರ್ಷಿಕ ಮಹಾಸಭೆಯ ವಿಷಯಪಟ್ಟಿಯನ್ನು ತಯಾರಿಸಿ ದಿ:30-09-05 ರಂದು ಸನ್ 2004-05 ನೆಯ ವಾರ್ಷಿಕ ಮಹಾಸಭೆಯನ್ನು ಕರೆಯುವುದು ಆಡಳಿತ ಮಂಡಳಿಯ ಆದ್ಯ ಕರ್ತವ್ಯವಾಗಿರುತ್ತದೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರ ಇವರು ಅನುಮತಿಸಿದ ಪ್ರಕಾರ ಸನ್ 2004-05ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿ: 30-11-2005ರ ಒಳಗಾಗಿ ಜರುಗಿಸಿರುವುದಿಲ್ಲ. ಆದುದರಿಂದ ಈ ಕಾಯ್ದೆ ಉಲ್ಲಂಘನೆಯಾಗಿರುತ್ತದೆ. ಆದುದರಿಂದ ಈ ಆರೋಪ.

**ಆಡಳಿತ ಮಂಡಳಿ ಸದಸ್ಯರು ಈ ಆರೋಪಕ್ಕೆ ಕೆಳಗಿನಂತೆ ಸಮಜಾಯಿಷಿಯನ್ನು ಕೊಟ್ಟಿರುತ್ತಾರೆ:**

ಈ ಆರೋಪವು ನಿಗದಿತ ಅವಧಿಯೊಳಗೆ 2004-05ನೇ ಸಾಲಿನ ಮಹಾಸಭೆಯನ್ನು ಮಾಡದೆ ಇರುವ ವಿಷಯಕ್ಕೆ ಸಂಬಂಧಿಸಿರುತ್ತದೆ. ಸಂಘವು ತನ್ನ 2004-05ನೇ ಸಾಲಿನ ಮಹಾಸಭೆಯನ್ನು 30.9.2005 ರೊಳಗೆ ನಡೆಸಬೇಕಾಗಿರುತ್ತದೆ. ಆದರೆ ಸದರಿ ಸಭೆ ನಡೆಸಲು ಹೆಚ್ಚಿನ ಕಾಲಾವಕಾಶ ಅಗತ್ಯವೆಂದು ನಾವು ಕೇಳಿಕೊಂಡ ಹಿನ್ನೆಲೆಯಲ್ಲಿ 30.11.2005 ರ ಒಳಗಾಗಿ ವಾರ್ಷಿಕ ಮಹಾಸಭೆ ನಡೆಸಲು ಸಹಕಾರ ಸಂಘಗಳ

ಸಹಾಯಕ ನಿಬಂಧಕರು, ರಾಮನಗರ ಇವರು ದಿ:27.9.2005 ರ ಆದೇಶದ ಪ್ರಕಾರ ನಮಗೆ ಅನುಮತಿ ನೀಡಿರುತ್ತಾರೆ. 27.9.2005 ರ ಆದೇಶದ ಪ್ರತಿಯನ್ನು ಅಡಕ (ಅ) ಎಂದು ಲಗತ್ತಿಸಲಾಗಿದೆ. ಆದರೆ 2001–02ನೇ ಸಾಲಿನ ಈ ತಹಲ್‌ವರೆವಿಗೂ ಲೆಕ್ಕತಪಾಸಣೆ ಆಗಿರುವುದಿಲ್ಲ. ಹೀಗಾಗಿ ದಿ: 30.11.2005 ರ ಒಳಗಾಗಿ 2004–05ನೇ ಸಾಲಿನ ಮಹಾಸಭೆ ನಡೆಸಲು ಸಾಧ್ಯವಾಗಿರುವುದಿಲ್ಲ. ದಿ: 31.3.2006 ರೊಳಗೆ ನಡೆಸಲು ಅನುಮತಿ ನೀಡುವಂತೆ ಸಹಾಯಕ ನಿಬಂಧಕರನ್ನು ಕೋರಲಾಗಿದೆ. ಒಪ್ಪಿದ ಬಗ್ಗೆ ಅಥವಾ ತಿರಸ್ಕರಿಸಿದ ಬಗ್ಗೆ ನಮಗೆ ಯಾವುದೇ ಹಿಂಬರಹ ನೀಡಿರುವುದಿಲ್ಲ. ಆದಾಗ್ಯೂ ನಾವುಗಳು ದಿ:22.3.2006 ರಂದು 2004–05 ನೇ ಸಾಲಿನ ಮಹಾಸಭೆಯನ್ನು ನಡೆಸಿರುತ್ತೇವೆ.

**ಈ ಕಾರ್ಯಾಲಯದ ಮುಖ್ಯ ಅಧಿಕಾರಿಗಳ ಅಭಿಪ್ರಾಯ:–**

ಸಂಘದ ಆಡಳಿತ ಮಂಡಳಿಯು 2001–02ನೇ ಸಾಲಿನ ತಹಲ್‌ವರೆಗೂ ಲೆಕ್ಕ ತಪಾಸಣೆ ಆಗಿರುವುದಿಲ್ಲ. ಈ ಕಾರಣದಿಂದಾಗಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರ ಉಪವಿಭಾಗ, ರಾಮನಗರ ಇವರು ಸಂಘದ 2004–05ನೇ ಸಾಲಿನ ಮಹಾಸಭೆಯನ್ನು ದಿನಾಂಕ:30–11–2005ರೊಳಗಾಗಿ ಜರುಗಿಸಲು ಆಗಿರುವುದಿಲ್ಲವೆಂದು ಕಾರಣ ಕೊಟ್ಟಿರುತ್ತಾರೆ. ಕಲಂ 27ರ ಪ್ರಕಾರ ವಾರ್ಷಿಕ ಮಹಾಸಭೆ ಜರುಗಿಸುವುದಕ್ಕೂ ಹಾಗೂ ಲೆಕ್ಕಪರಿಶೋಧನೆ ಬಾಕಿ ಇರುವುದಕ್ಕೂ ಒಂದಕ್ಕೊಂದು ಪೂರಕವಾದ ಅಂಶಗಳು ಇರುವುದಿಲ್ಲ. ಕೊಟ್ಟ ಕಾರಣವು ಅಸಮರ್ಪಕವಾಗಿರುತ್ತದೆ. ಮತ್ತು ದಿನಾಂಕ: 31–3–2006ರೊಳಗೆ ಈ ಮಹಾಸಭೆಯನ್ನು ಜರುಗಿಸಲು ಅಧಿಕಾರಸ್ಥ ನಿಬಂಧಕರಿಗೆ ಸಲ್ಲಿಸಲಾಗಿದೆಯೆಂದು ಹೇಳಲಾದ ಪ್ರಸ್ತಾವನೆಯ ನಕಲನ್ನು ಲಗತ್ತಿಸಿರುವುದಿಲ್ಲ. ಮತ್ತು ಅಧಿಕಾರಸ್ಥ ನಿಬಂಧಕರಿಂದ ದೊರೆತ ಅನುಮತಿಯನ್ನು ತಮ್ಮ ಸಮಜಾಯಿಷಿಯಲ್ಲಿ ನಮೂದಿಸಿರುವುದಿಲ್ಲ. ಅಲ್ಲದೆ ಸಂಘದವರು ಈ ಮಹಾಸಭೆಯನ್ನು ದಿನಾಂಕ:30–11–2005 ರೊಳಗಾಗಿ ಜರುಗಿಸದೆ ದಿನಾಂಕ:22–3–2006 ರಂದು ಜರುಗಿಸಿರುವುದಾಗಿ ಒಪ್ಪಿಕೊಂಡಿರುವುದರಿಂದ ಈ ಆರೋಪವು ಸಿದ್ಧವಾಗುತ್ತದೆ.

**ಆರೋಪ – 2 :–**

ಸಂಘದ ಅಡಾವೆ ಪತ್ರಿಕೆಯನ್ನು ಪರಿಶೀಲಿಸಲಾಗಿ ಸಂಘದ ಕಟ್ಟಡ ಕಟ್ಟಲು ಸಾಕಷ್ಟು ಪ್ರಮಾಣದ ಕಟ್ಟಡ ನಿಧಿಯು ಇಲ್ಲದೆ ಇದ್ದರೂ ಇಲಾಖೆಯ ಅನುಮತಿಯನ್ನು ಪಡೆಯದೆ ಕಟ್ಟಡ ನಿರ್ಮಾಣದಲ್ಲಿ ಸಂಘದ ಬಂಡವಾಳವನ್ನು ತೊಡಗಿಸಿ ಇಲಾಖೆಯ ಅಧಿಸೂಚನೆಯನ್ನು ಉಲ್ಲಂಘನೆ ಮಾಡಿದ್ದರಿಂದ ಈ ಆರೋಪ.

**ಆಡಳಿತ ಮಂಡಳಿ ಸದಸ್ಯರು ಈ ಆರೋಪಕ್ಕೆ ಕೆಳಗಿನಂತೆ ಸಮಜಾಯಿಷಿಯನ್ನು ಕೊಟ್ಟಿರುತ್ತಾರೆ:**

ಈ ಆರೋಪವು ಸಂಘದ ದುಡಿಯುವ ಬಂಡವಾಳವನ್ನು ಉಪಯೋಗಿಸಿಕೊಂಡು ಸಂಘದ ಕಟ್ಟಡ ನಿರ್ಮಿಸುವ ವಿಷಯಕ್ಕೆ ಸಂಬಂಧಿಸಿರುತ್ತದೆ. ಈ ಆರೋಪವು ಸತ್ಯಕ್ಕೆ ದೂರವಾದ ಆರೋಪವಾಗಿರುತ್ತದೆ. ಈ ಆರೋಪದಲ್ಲಿ ಸಂಘದಲ್ಲಿ ಸಾಕಷ್ಟು ಕಟ್ಟಡ ನಿಧಿ ಇಲ್ಲದೇ ಇದ್ದರೂ ಸಹ ಇಲಾಖೆ ಅನುಮತಿ ಪಡೆಯದೆ ಸಂಘದ ಬಂಡವಾಳವನ್ನು ತೊಡಗಿಸಿ ಇಲಾಖೆಯ ಅಧಿಸೂಚನೆಯನ್ನು ಉಲ್ಲಂಘನೆ ಮಾಡಲಾಗಿದೆ. ಈ ಆರೋಪವು ನಿರ್ಮಿಸಲು ಸಹಾಯಕ ನಿಬಂಧಕರು, ರಾಮನಗರ ಇವರು ದಿ: 1–7–2004ರಂದು ಆಡಳಿತಾತ್ಮಕ ಅನುಮೋದನೆ ನೀಡಿರುತ್ತಾರೆ. ದಿ: 1.7.2004 ರ ಜೆರಾಕ್ಸ್ ಪ್ರತಿಯನ್ನು ಅಡಕ (ಈ) ಎಂದು ಈ ಪತ್ರದ ಜೊತೆ ಲಗತ್ತಿಸಿದೆ. ಅದೇ ರೀತಿಯಾಗಿ ದಿ: 11.8.2004 ರಂದು ಕಟ್ಟಡದ ನೀಲಿ ನಕ್ಷೆಯನ್ನು ನಿಬಂಧಕರು, ಕರ್ನಾಟಕ ಸಹಕಾರ ಇಲಾಖೆ ಇವರು ಅನುಮೋದನೆ ನೀಡಿರುತ್ತಾರೆ. ಇದರ ಅನುಮೋದನೆ ನೀಲಿ ನಕ್ಷೆಯ ಜೆರಾಕ್ಸ್ ಪ್ರತಿಯನ್ನು ಅಡಕ (ಉ) ಎಂದು ಲಗತ್ತಿಸಲಾಗಿದೆ. ಆದ್ದರಿಂದ ಇಲಾಖೆಯಿಂದ ಅನುಮತಿ ಪಡೆದಿಲ್ಲ ಎಂಬ ಆರೋಪ ಸತ್ಯಕ್ಕೆ ದೂರವಾಗಿರುತ್ತದೆ. ಸಂಘದಲ್ಲಿ 5678–00 ರೂಗಳು ಕಟ್ಟಡ ನಿಧಿ ಇದ್ದು ಜಿಲ್ಲಾ ಪಂಚಾಯಿತಿಯಿಂದ ಹಾಗೂ ಜಿಲ್ಲಾ ಹಾಲು ಒಕ್ಕೂಟದ ವತಿಯಿಂದ ಕ್ರಮವಾಗಿ 50000/– 25000 ಅನುದಾನ ದೊರಕಿರುತ್ತದೆ. ಜಿಲ್ಲಾ ಹಾಲು ಒಕ್ಕೂಟದಿಂದ 1 ಲಕ್ಷ ರೂಗಳನ್ನು ಪಡೆಯಲಾಗಿದೆ. ಅಲ್ಲದೆ ಸಂಘದ ಅಧ್ಯಕ್ಷರು ಈ ಉದ್ದೇಶಕ್ಕಾಗಿ ಬಡ್ಡಿ ರಹಿತ ಠೇವಣಿ ತೊಡಗಿಸಿರುತ್ತಾರೆ. ಈ ರೀತಿಯಾಗಿ ಈ ಎಲ್ಲಾ ಮೊಬಲಗನ್ನು ಉಪಯೋಗಿಸಿಕೊಂಡು ಸಂಘದ ಕಟ್ಟಡ ನಿರ್ಮಾಣ ಮಾಡಿದೆ ಎಂಬ ಆರೋಪ ಸತ್ಯಕ್ಕೆ ದೂರವಾಗಿರುತ್ತದೆ.

**ಈ ಕಾರ್ಯಾಲಯದ ಮುಖ್ಯ ಅಧಿಕಾರಿಗಳ ಅಭಿಪ್ರಾಯ:–**

ಆಡಳಿತ ಮಂಡಳಿ ಸದರಿ ಕಟ್ಟಡವನ್ನು ಕಟ್ಟಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರ ಉಪವಿಭಾಗ, ರಾಮನಗರ ಇವರು ದಿನಾಂಕ:1–7–2004 ರಂದು ಕೊಟ್ಟ ಆಡಳಿತಾತ್ಮಕ ಮಂಜೂರಿ ಪ್ರಕಾರ ಕಟ್ಟಡಗಳನ್ನು ಕಟ್ಟಲು ಅನುಮತಿಸಿದ್ದು, ಈ ಅನುಮತಿ ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಆಪದನ ರೂ.1,67,742–00 ಉಪಯೋಗಿಸುವ ಬಗ್ಗೆ ಮಂಜೂರಿಯನ್ನು ಆಡಳಿತ ಮಂಡಳಿಯು ಪಡೆದುಕೊಂಡಿರುವುದಿಲ್ಲ. ಹೀಗಾಗಿ ಆಡಳಿತ ಮಂಡಳಿಯವರು ಕೊಟ್ಟ ಸಮಜಾಯಿಷಿಯು ಆರೋಪಕ್ಕೆ ಸರಿಯಿರದೆ ಇರುವುದರಿಂದ ಈ ಆರೋಪವು ಸ್ಥಿರಪಡುತ್ತದೆ. ಮುಂದುವರೆಯುತ್ತಾ ಸಂಘದ ಅಧ್ಯಕ್ಷರು ಈ ಉದ್ದೇಶಕ್ಕಾಗಿ ಬಡ್ಡಿ ರಹಿತ ಠೇವಣಿ ತೊಡಗಿಸಿರುತ್ತಾರೆ ಎಂದು ಹೇಳಿದ್ದು, ಅಸಮರ್ಪಕವಾಗಿರುತ್ತದೆ. ಠೇವಣಿಯನ್ನು ಠೇವಣಿದಾರರು ಬೇಡಿಕೆ ಸಲ್ಲಿಸಿದ ತಕ್ಷಣ ಅದನ್ನು ಮರು ಪಾವತಿಸುವುದು ಸಂಘದ ಕರ್ತವ್ಯವಾಗಿರುತ್ತದೆ. ಈ ಹೇಳಿಕೆಯು ಸಹ ಅಸಮರ್ಪಕವಾಗಿರುತ್ತದೆ.

**ಆರೋಪ – 3 :–**

ಕರ್ನಾಟಕ ಸಹಕಾರ ಸಂಘಗಳ 1959 ನೇ ಇಸವಿಯ ನಿಯಮ 17 ಮತ್ತು ನಿಯಮ 18 ನೇದ್ದನ್ನು ಅಲಕ್ಷಿಸಿ ಸಂಘದ ಸಿಬ್ಬಂದಿಯನ್ನು ನೇಮಕಾತಿ ಮಾಡಿಕೊಂಡಿದ್ದರಿಂದ ಈ ಆರೋಪ.

**ಆಡಳಿತ ಮಂಡಳಿ ಸದಸ್ಯರು ಈ ಆರೋಪಕ್ಕೆ ಕೆಳಗಿನಂತೆ ಸಮಜಾಯಿಷಿಯನ್ನು ಕೊಟ್ಟಿರುತ್ತಾರೆ:**

ಈ ಆರೋಪದಲ್ಲಿ ನಿಯಮ 17 ನ್ನು ಅಲಕ್ಷಿಸಿ ಸಂಘದ ಸಿಬ್ಬಂದಿ ನೇಮಕ ಮಾಡಿಕೊಳ್ಳಲಾಗಿದೆ ಎಂದು ಆರೋಪಿಸಲಾಗಿದೆ. ನಾವುಗಳು ದಿ: 31.12.2003 ರಂದು ಚುನಾಯಿಸಲ್ಪಟ್ಟಿರುತ್ತೇವೆ. ನಾವು ಚುನಾಯಿತರಾಗಿ ಬಂದ ನಂತರ ಯಾವ ಸಿಬ್ಬಂದಿ ನೇಮಕ ಮಾಡಿಕೊಂಡಿರುವುದಿಲ್ಲ.

ಆದ್ದರಿಂದ ನಿಯಮ 17 ರ ಪ್ರಶ್ನೆ ಉದ್ಭವಿಸುವುದಿಲ್ಲ. ಆದ್ದರಿಂದ ಈ ಆರೋಪದಲ್ಲಿ ಹುರುಳಿರುವುದಿಲ್ಲ. ಆದ್ದರಿಂದ ಈ ಆರೋಪ ಕೈಬಿಡಲು ಕೋರಿದೆ.

**ಈ ಕಾರ್ಯಾಲಯದ ಮುಖ್ಯ ಅಧಿಕಾರಿಗಳ ಅಭಿಪ್ರಾಯ:–**

ಆಡಳಿತ ಮಂಡಳಿ ವಿವರಣೆಯು ಈ ಆರೋಪಕ್ಕೆ ಸಂಬಂಧಪಟ್ಟಂತೆ ಸರಿಯಿರುವುದರಿಂದ ಅವರ ಸಮಜಾಯಿಷಿಯನ್ನು ಒಪ್ಪಿಕೊಳ್ಳಲಾಗಿದೆ. ಈ ಆರೋಪವನ್ನು ಕೈಬಿಡಲಾಗಿದೆ.

**ಆರೋಪ – 4 :–**

ಕರ್ನಾಟಕ ಸಹಕಾರ ಸಂಘಗಳ 1959ನೇ ಇಸವಿಯ ಅಧಿನಿಯಮ 63 ರನ್ವಯ ಸಂಘದ ಲೆಕ್ಕಪತ್ರಗಳನ್ನು ಶಾಸನಬದ್ಧ ವಾರ್ಷಿಕ ಲೆಕ್ಕ ಪರಿಶೋಧನೆಗೆ ಒಳಪಡಿಸುವುದು ಆಡಳಿತ ಮಂಡಳಿಯ ಕರ್ತವ್ಯವಾಗಿರುತ್ತದೆ. ಆದರೆ ಸಂಘದ ಲೆಕ್ಕಪರಿಶೋಧನೆಯು ಕಳೆದ 4 ವರ್ಷಗಳಿಂದ ಮಾಡಿಸದೆ ಬಾಕಿ ಉಳಿದಿರುತ್ತದೆ. ಕಾರಣ ಆಡಳಿತ ಮಂಡಳಿಯು ತನ್ನ ಕರ್ತವ್ಯದಲ್ಲಿ ವಿಫಲರಾಗಿದ್ದರಿಂದ ಈ ಆರೋಪ.

**ಆಡಳಿತ ಮಂಡಳಿ ಸದಸ್ಯರು ಈ ಆರೋಪಕ್ಕೆ ಕೆಳಗಿನಂತೆ ಸಮಜಾಯಿಷಿಯನ್ನು ಕೊಟ್ಟಿರುತ್ತಾರೆ:**

ಈ ಆರೋಪದಲ್ಲಿ ಕಳೆದ ನಾಲ್ಕು ವರ್ಷಗಳಿಂದ ಲೆಕ್ಕಪರಿಶೋಧನೆ ಆಗಿಲ್ಲವೆಂದು ಆರೋಪಿಸಲಾಗಿದೆ. ಇದಕ್ಕೆ ಆಡಳಿತ ಮಂಡಳಿ ಕರ್ತವ್ಯ ಲೋಪ ಎಂದು ಆರೋಪಿಸಲಾಗಿದೆ. ಈ ಬಗ್ಗೆ ನಾವು ನಿವೇದಿಸ ಬಯಸುವುದೇನೆಂದರೆ ಈಗಾಗಲೇ ಹೇಳಿದಂತೆ ನಾವುಗಳು ಡಿಸೆಂಬರ್ 2003 ರಲ್ಲಿ ಚುನಾಯಿತರಾಗಿರುತ್ತೇವೆ. ಆದರೆ 2001–02ನೇ ಸಾಲಿನಿಂದ ಸಂಘದ ಲೆಕ್ಕಪತ್ರ ಪರಿಶೋಧನೆ ನಡೆದಿರುವುದಿಲ್ಲ. ಆ ವೇಳೆಯಲ್ಲಿ ನಾವು ಸಂಘದ ಆಡಳಿತ ಮಂಡಳಿ ಇರುವುದಿಲ್ಲ. ಆದಾಗ್ಯೂ ಸಹ ನಾವು ಚುನಾಯಿತರಾಗಿ ಬಂದ ನಂತರ ಸಂಹದ ಲೆಕ್ಕಪರಿಶೋಧನೆಗೆ ಕ್ರಮಕೈಗೊಂಡಿದ್ದು ಹಾಲಿ ಲೆಕ್ಕಪತ್ರಗಳ ಪರಿಶೀಲನೆ ಪ್ರಗತಿಯಲ್ಲಿರುತ್ತದೆ. ಈ ಬಗ್ಗೆ ಲೆಕ್ಕಪರಿಶೋಧಕರು ಸಂಘದ ಮಾಜಿ ಕಾರ್ಯದರ್ಶಿ ಶ್ರೀ ಯತಿರಾಜ್‌ರವರಿಗೆ ನೀಡಿರುವ ಪ್ರತಿಯನ್ನು ಅಡಕ (ಊ) ಎಂದು ಲಗತ್ತಿಸಿದೆ. ದುರದೃಷ್ಟವಶಾತ್ 2001–02ನೇ ಸಾಲಿನ ಲೆಕ್ಕಪತ್ರಗಳ ಪರಿಶೀಲನೆ ನಡೆಸಲು ಕ್ರಮ ತೆಗೆದುಕೊಂಡಿರುವ ನಮ್ಮ ವಿರುದ್ಧವೇ ಈ ಆರೋಪ ಹೊರಿಸಿರುವುದು ದುರದೃಷ್ಟಕರ. ಈ ಆರೋಪಕ್ಕೆ ನಾವು ಯಾವುದೇ ರೀತಿ ಜವಾಬ್ದಾರರಲ್ಲ.

**ಈ ಕಾರ್ಯಾಲಯದ ಮುಖ್ಯ ಅಧಿಕಾರಿಗಳ ಅಭಿಪ್ರಾಯ:–**

ಆಡಳಿತ ಮಂಡಳಿ ಸದಸ್ಯರು ಸಲ್ಲಿಸಿದ ತಮ್ಮ ಸಮಜಾಯಿಷಿಗೆ ಲಗತ್ತಿಸಲಾದ ಅಡಕ(ಊ) ಇದನ್ನು ಪರಿಶೀಲಿಸಲಾಗಿದೆ. ಅಡಕ (ಊ) ಇದನ್ನು ಸಹಕಾರ ಸಂಘಗಳ ಹಿರಿಯ ಲೆಕ್ಕಪರಿಶೋಧಕರು ದಿನಾಂಕ:7–6–2006 ರಂದು ಬೈರಾಪಟ್ಟಣ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಬೈರಾಪಟ್ಟಣ, ಚನ್ನಪಟ್ಟಣ ತಾ: ಇದರ ಸನ್ 2001–02 ಮತ್ತು 2002–03ನೇ ಸಾಲಿನ ಲೆಕ್ಕಪರಿಶೋಧನೆಗೆ ಸಂಬಂಧಪಟ್ಟ ವಿಷಯವಾಗಿರುತ್ತದೆ. ಮತ್ತು ಆಡಳಿತ ಮಂಡಳಿಯವರು ಕೊಟ್ಟ ಉತ್ತರದಲ್ಲಿ ತಾವು ದಿನಾಂಕ:31–12–2003 ರಂದು ಚುನಾಯಿತರಾಗಿ ಅಧಿಕಾರಕ್ಕೆ ಬಂದಿದ್ದು ಇರುತ್ತದೆ. ಮತ್ತು ಸನ್ 2003–04 ರಿಂದ ಇಲ್ಲಿಯವರೆಗೆ ಲೆಕ್ಕಪರಿಶೋಧನೆ ಆಗಿರುವುದಿಲ್ಲವೆನ್ನುವ ಅಂಶವು ನಿಜವಿರುತ್ತದೆ. ಈ ಆರೋಪಕ್ಕೆ ಆಡಳಿತ ಮಂಡಳಿಯವರು ಯಾವುದೇ ರೀತಿಯಿಂದ ಜವಾಬ್ದಾರರಲ್ಲ ಎನ್ನುವ ಸಮಜಾಯಿಷಿ ತಮ್ಮ ಶಾಸನಬದ್ಧ ಹೊಣೆಗಾರಿಕೆಯನ್ನು ತಿರಸ್ಕರಿಸಿದಂತಾಗಿದೆ. ಆದ್ದರಿಂದ ಈ ಆರೋಪವು ದೃಢಪಟ್ಟಿರುತ್ತದೆ.

**ಆರೋಪ – 5 :–**

ಸಂಘದ ಲೆಕ್ಕಪತ್ರಗಳನ್ನು ನಿಬಂಧಕರು ಸೂಚಿಸಿದ ವಿಧಿ ವಿಧಾನದ ಪ್ರಕಾರ ಇಡುವುದು. ನಿಯಮ 52 ರ ಪ್ರಕಾರ ಆಡಳಿತ ಮಂಡಳಿಯ ಜವಾಬ್ದಾರಿಯಾಗಿರುತ್ತದೆ. ಈ ಜವಾಬ್ದಾರಿಯನ್ನು ಅಡಳಿತ ಮಂಡಳಿಯ ಜವಾಬ್ದಾರಿಯಾಗಿರುತ್ತದೆ. ಈ ಜವಾಬ್ದಾರಿಯನ್ನು ಆಡಳಿತ ಮಂಡಳಿಯ ನಿಯಂತ್ರಣಕ್ಕೆ ಒಳಪಟ್ಟ ಕಾರ್ಯದರ್ಶಿಗಳಿಂದ ಇಡಿಸುವುದು ಆಡಳಿತ ಮಂಡಳಿಯ ಜವಾಬ್ದಾರಿಯಾಗಿರುತ್ತದೆ. ಈ ಕರ್ತವ್ಯ ನಿರ್ವಹಣೆಯನ್ನು ನಿರ್ವಹಿಸಲು ಆಡಳಿತ ಮಂಡಳಿಯ ಸಂಪೂರ್ಣ ವಿಫಲವಾಗಿದ್ದರಿಂದ ಈ ಆರೋಪ.

**ಆಡಳಿತ ಮಂಡಳಿ ಸದಸ್ಯರು ಈ ಆರೋಪಕ್ಕೆ ಕೆಳಗಿನಂತೆ ಸಮಜಾಯಿಷಿಯನ್ನು ಕೊಟ್ಟಿರುತ್ತಾರೆ:**

ಈ ಆರೋಪದಲ್ಲಿ ಸಂಘದ ಲೆಕ್ಕಪತ್ರಗಳನ್ನು ವಿಧಿವಿಧಾನದ ಪ್ರಕಾರ ಇಟ್ಟಿರುವುದಿಲ್ಲ ಎಂದು ಆರೋಪಿಸಲಾಗಿದೆ. ಈ ಆರೋಪವು ಬಹಳ ಅಸಂಬದ್ಧವಾಗಿರುತ್ತದೆ. ಸಂಘದ ಲೆಕ್ಕಪತ್ರಗಳನ್ನು ಯಾವ ವಿಧಿ ವಿಧಾನದ ಪ್ರಕಾರ ಇಟ್ಟಿರಬೇಕು ಎಂಬುದನ್ನು ನಿರ್ದಿಷ್ಟವಾಗಿ ತಿಳಿಸಿದೆ. ಅಸಂಬದ್ದವಾಗಿ ಆರೋಪ ಹೊರೆಸಿರುವುದು ದುರದೃಷ್ಟಕರ. ಇಂತಹ ಆರೋಪಗಳು ಕಲಂ 30 (1) ರ ಪ್ರಕಾರ ಕ್ರಮಕೈಗೊಳ್ಳಲು ಆಧಾರವಾಗುವುದಿಲ್ಲವೆಂದು ತಿಳಿಸಲು ಬಯಸುತ್ತೇವೆ. ಅಲ್ಲದೆ ಸಂಘಕ್ಕೆ ಹಲವಾರು ಬಾರಿ ಇಲಾಖೆಯ ಅಧಿಕಾರಿಗಳು ಮತ್ತು ಒಕ್ಕೂಟದ ಅಧಿಕಾರಿಗಳು ಸಂಘಕ್ಕೆ ಬೇಟಿ ನೀಡಿ ಲೆಕ್ಕಪತ್ರಗಳನ್ನು ಪರಿಶೀಲಿಸಿರುತ್ತಾರೆ. ಆದರೆ ಅವರು ಯಾವುದೇ ಸಂದರ್ಭದಲ್ಲಿಯೂ ಸಹ ಸಂಘದ ಲೆಕ್ಕಪತ್ರಗಳನ್ನು ಕ್ರಮಬದ್ದವಾಗಿ ಇಟ್ಟಿಲ್ಲವೆಂದು ಆಕ್ಷೇಪಿಸಿರುವುದಿಲ್ಲ. ಅಲ್ಲದೆ ಈ ಬಗ್ಗೆ ಇಲಾಖೆಯಿಂದಾಗಲಿ ಅಥವಾ ಒಕ್ಕೂಟದಿಂದಾಗಲಿ ಯಾವುದೇ ಮಾರ್ಗಸೂಚಿ ನೀಡಲ್ಪಟ್ಟಿರುವುದಿಲ್ಲ. ಆದಾಗ್ಯೂ ಸಹ ನಮ್ಮ ಸಂಘದ ಲೆಕ್ಕ ಪತ್ರಗಳನ್ನು ವಿಧಿ ಬದ್ದವಾಗಿ ನಿರ್ವಹಿಸಿರುತ್ತೇವೆ ಎಂದು ನಮೂದಿಸಬಯಸುತ್ತೇನೆ. ಆದ್ದರಿಂದ ಈ ಆರೋಪದಲ್ಲಿ ಯಾವುದೇ ಹುರುಳಿರುವುದಿಲ್ಲ.

**ಈ ಕಾರ್ಯಾಲಯದ ಮುಖ್ಯ ಅಧಿಕಾರಿಗಳ ಅಭಿಪ್ರಾಯ:–**

ಈ ಆರೋಪಕ್ಕೆ ಆಡಳಿತ ಮಂಡಳಿ ಸದಸ್ಯರು ಸಮಜಾಯಿಷಿಯನ್ನು ಸಲ್ಲಿಸುವಾಗೇ ಆರೋಪ–6ಕ್ಕೆ ಉತ್ತರಿಸುವಾಗೇ ಒಂದಕ್ಕೊಂದು ವಿರುದ್ಧವಾದ ಹೇಳಿಕೆಯಾಗಿರುತ್ತದೆ. ಆರೋಪ ಸಂಖ್ಯೆ 6 ರಲ್ಲಿ ಆಡಳಿತ ಮಂಡಳಿಯು ವಿವರಿಸುತ್ತಾ ಈ ಕರ್ತವ್ಯವನ್ನು ಆಗಿನ ಕಾರ್ಯದರ್ಶಿಯಾಗಿದ್ದ ಶ್ರೀ ಯತೀರಾಜ್ ಇವರ ಮೇಲೆ ವರ್ಗಾಯಿಸಿರುತ್ತಾರೆ. ಆದರೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 29 ಜಿ (4)ರನ್ವಯ ಕಾರ್ಯದರ್ಶಿಯು ಆಡಳಿತ ಮಂಡಳಿಯ ನಿರ್ದೇಶನ ಹಾಗೂ ನಿಯಂತ್ರಣಕ್ಕೆ ಒಳಪಟ್ಟು ಕೆಲಸ ನಿರ್ವಹಿಸಬೇಕಾಗಿದೆ. ಈ ವಾಸ್ತವಾಂಶವನ್ನು ಆಡಳಿತ ಮಂಡಳಿಯುವರು ಲಘುವಾಗಿ ಕಂಡಿರುವುದರಿಂದ ಈ ಆರೋಪವು ದೃಢಪಟ್ಟಿರುತ್ತದೆ.

**ಆರೋಪ – 6 :–**

ಕರ್ನಾಟಕ ಸಹಕಾರ ಸಂಘಗಳ 1959 ನೇ ಇಸವಿಯ ನಿಯಮ 53 ರನ್ವಯ ಪ್ರತಿ ವರ್ಷ ಮೇ ತಿಂಗಳ ಅಂತ್ಯದೊಳಗೆ ಆಯಾ ವರ್ಷಗಳ ಆರ್ಥಿಕ ತಃಖ್ತೆಗಳನ್ನು ತಯಾರಿಸಿ ಪ್ರಸಿದ್ದ ಪಡಿಸುವುದು ಆಡಳಿತ ಮಂಡಳಿಯ ಜವಾಬ್ದಾರಿಯಾಗಿರುತ್ತದೆ. ಈ ಜವಾಬ್ದಾರಿಯನ್ನು ಕಳೆದ 4 ವರ್ಷಗಳಿಂದ ನಿರ್ವಹಿಸಿರುವುದಿಲ್ಲ. ಆದ್ದರಿಂದ ಈ ಆರೋಪ.

**ಆಡಳಿತ ಮಂಡಳಿ ಸದಸ್ಯರು ಈ ಆರೋಪಕ್ಕೆ ಕೆಳಗಿನಂತೆ ಸಮಜಾಯಿಷಿಯನ್ನು ಕೊಟ್ಟಿರುತ್ತಾರೆ:**

ಈ ಆರೋಪದಲ್ಲಿ ಸಂಘವು ಕಳೆದ ನಾಲ್ಕು ವರ್ಷಗಳಿಂದ ನಿಯಮ 53 ರ ಪ್ರಕಾರ ಸಂಘದ ಆರ್ಥಿಕ ತಃಖ್ತೆಗಳನ್ನು ತಯಾರಿಸಿ ಪ್ರಸಿದ್ಧಿಪಡಿಸಿಲ್ಲವೆಂದು ಆರೋಪಿಸಲಾಗಿದೆ. ಈ ಬಗ್ಗೆ ನಾನು ನಿವೇದಿಸಬಯಸುವುದೇನೆಂದರೆ ಸಂಘದ ಕಾರ್ಯದರ್ಶಿಯವರಾಗಿದ್ದ ಶ್ರೀ ಯತಿರಾಜ್‌ರವರು ಸರಿಯಾಗಿ ಕರ್ತವ್ಯ ನಿರ್ವಹಿಸುತ್ತಿರಲಿಲ್ಲ. ಆದರೆ ಅವರು ದುರುದ್ದೇಶದಿಮದ ನಮ್ಮ ರಾಜಕೀಯ ವಿರುದಾಳಿಗಳ ಜೊತೆ ಸೇರಿಕೊಂಡು ಸಂಘದ ಕಾರ್ಯಚಟುವಟಿಕೆಗಳಲ್ಲಿ ನಮ್ಮ ಜೊತೆ ಸಹಕರಿಸುತ್ತಿರಲಿಲ್ಲ. ಹೀಗಾಗಿ ಅವರು 2001–02 ನೇ ಸಾಲಿನಿಂದ ಸಂಘದ ಲೆಕ್ಕಪತ್ರಗಳನ್ನು ತಪಾಸಣೆ ಮಾಡಿಸಲು ಯಾವುದೇ ಕ್ರಮ ಕೈಗೊಂಡಿರುವುದಿಲ್ಲ. ಹೀಗಾಗಿ ಸಂಘದ ಕಾರ್ಯದರ್ಶಿಯಾಗಿದ್ದ ಶ್ರೀ ಯತಿರಾಜುರವರನ್ನು ಮೊದಲು ಸೇವೆಯಿಂದ ಅಮಾನತ್ತುಗೊಳಿಸಿ ಅನಂತರ ಅವರು ವಿರುದ್ದ ಶಿಸ್ತಿನ ವಿಚಾರಣೆ ನಡೆಸಿ ಅವರನ್ನು ಸೇವೆಯಿಂದ ವಜಾ ಮಾಡಿರುತ್ತೇವೆ.

ಆದಾಗ್ಯೂ ನಾವು ಈ ಬಗ್ಗೆ ನಿವೇದಿಸಬಯಸುವುದೇನೆಂದರೆ ನಾವು ಡಿಸೆಂಬರ್ 2003 ರಲ್ಲಿ ಚುನಾಯಿತರಾಗಿದ್ದು ನಮ್ಮ ಅವಧಿಯ ಎಲ್ಲಾ ಆರ್ಥಿಕ ತಃಖ್ತೆಗಳನ್ನು ತಯಾರಿಸಿ ಸಂಘದಲ್ಲಿ ಸಿದ್ದವಾಗಿಟ್ಟಿರುತ್ತದೆ. ಸದರಿ ಅವಧಿಯ ಲೆಕ್ಕಪತ್ರಗಳನ್ನು ತಪಾಸಣೆ ನಡೆಸಲು ನಾವು ಕೈಗೊಂಡಿದ್ದು ಲೆಕ್ಕಪತ್ರಗಳ ಪರಿಶೀಲನೆ ಪ್ರಗತಿಯಲ್ಲಿರುತ್ತದೆ. ಲೆಕ್ಕಪತ್ರ ತಪಾಸಣೆ ಮುಗಿದ ನಂತರ ಎಲ್ಲಾ ಆರ್ಥಿಕ ತಃಖ್ತೆಗಳನ್ನು ಇಲಾಖೆಗೆ ಸಲ್ಲಿಸಲಾಗುತ್ತದೆ.

**ಈ ಕಾರ್ಯಾಲಯದ ಮುಖ್ಯ ಅಧಿಕಾರಿಗಳ ಅಭಿಪ್ರಾಯ:–**

ಕರ್ನಾಟಕ ಸಹಕಾರ ಸಂಘಗಳ 1959 ನೇ ಇಸವಿಯ ನಿಯಮ 53 ರನ್ವಯ ಪ್ರತಿ ವರ್ಷ ಮೇ ತಿಂಗಳ ಅಂತ್ಯದೊಳಗೆ ಆಯಾ ವರ್ಷಗಳ ಆರ್ಥಿಕ ತಃಖ್ತೆಗಳನ್ನು ಲೆಕ್ಕಪರಿಶೋಧನೆಯಾದ ನಂತರ ಪ್ರಸಿದ್ಧ ಪಡಿಸಬೇಕೆನ್ನುವುದು ಇರುವುದಿಲ್ಲ. ಆದ್ದರಿಂದ ಲೆಕ್ಕಪತ್ರ ತಪಾಸಣೆ ಮುಗಿದ ನಂತರ ಎಲ್ಲಾ ಆರ್ಥಿಕ ತಃಖ್ತೆಗಳನ್ನು ಇಲಾಖೆಗೆ ಸಲ್ಲಿಸಲಾಗುತ್ತದೆ ಎನ್ನುವ ಹೇಳಿಕೆ ಆಪಾಧನೆಯನ್ನು ಒಪ್ಪಿಕೊಂಡಂತಾಗಿದೆ. ಆದ್ದರಿಂದ ಈ ಆರೋಪವು ದೃಡಪಟ್ಟಿದೆ.

**ಆರೋಪ – 7 :–**

ಸಂಘವು ಅನವಶ್ಯಕವಾದ ವ್ಯಾಜ್ಯಗಳಿಗೆ ಬಂಡವಾಳವನ್ನು ಖರ್ಚು ಮಾಡುತ್ತಿದೆ. ಇದರಿಂದಾಗಿ ಆಡಳಿತ ಮಂಡಳಿಯು ಸಂಘವನ್ನು ಸಮಸ್ಯಾತ್ಮಕ ಸಂಘವೆಂದು ಗುರುತಿಸಿಕೊಳ್ಳುವಲ್ಲಿ ಪ್ರಯತ್ನ ಮಾಡುತ್ತಿದೆ. ಈ ವಿಷಯವು ಸಂಘದ ಮಾಜಿ ಕಾರ್ಯದರ್ಶಿ ಎಂ. ರಾಜು ಇವರ ಪ್ರಕರಣದಲ್ಲಿ ನ್ಯಾಯಾಲಯದ ಶುಲ್ಕ ಎಂದು ಒಟ್ಟಾಗಿ ಅಜಮಾನು ರೂ. 50,000/– ವೆಚ್ಚ ಮಾಡಿರುವುದನ್ನು ಸಿದ್ದಪಡಿಸಿರುತ್ತದೆ. ಆದ್ದರಿಂದ ಈ ಆರೋಪ.

**ಆಡಳಿತ ಮಂಡಳಿ ಸದಸ್ಯರು ಈ ಆರೋಪಕ್ಕೆ ಕೆಳಗಿನಂತೆ ಸಮಜಾಯಿಷಿಯನ್ನು ಕೊಟ್ಟಿರುತ್ತಾರೆ:**

ಈ ಆರೋಪದಲ್ಲಿ ಸಂಘವು ಅನಾವಶ್ಯಕ ವ್ಯಾಜ್ಯಗಳಿಗೆ ಬಂಡವಾಳವನ್ನು ಖರ್ಚು ಮಾಡುತ್ತಿದೆ ಮತ್ತು ಮಾಜಿ ಕಾರ್ಯದರ್ಶಿ ಎಂ.ರಾಜು ನ್ಯಾಯಾಲಯದ ಖರ್ಚು ಒಟ್ಟಾಗಿ 50 ಸಾವಿರ ವೆಚ್ಚವಾಗಿದೆ ಎಂದು ಅರೋಪಿಸಲಾಗಿದೆ. ಈ ಆರೋಪವು ಸತ್ಯಕ್ಕೆ ದೂರವಾದದ್ದು. ಶ್ರೀ ಎಂ.ರಾಜುರವರು ಸಂಘದ ಹಾಲಿ ಕಾರ್ಯದರ್ಶಿಯಾಗಿದ್ದು ಅವರ ವಿರುದ್ದ ಯಾವುದೇ ಪ್ರಕರಣ ದಾಖಲಾಗಿರುವುದಿಲ್ಲ. ಮತ್ತು ಯಾವುದೇ ನ್ಯಾಯಾಲಯದ ಶುಲ್ಕ ಖರ್ಚು ಹಾಕಿರುವುದಿಲ್ಲ. ಆದ್ದರಿಂದ ಈ ಆರೋಪವು ನಿರಾಧಾರವಾಗಿರುತ್ತದೆ. ಆದಾಗ್ಯೂ ಈ ಬಗ್ಗೆ ನಿವೇದಿಸಬಯಸುವುದು ಏನೆಂದರೆ ಸಂಘದಲ್ಲಿ ನಡೆಸಿರುವ ಸಿಬ್ಬಂದಿಗಳು ಇಲಾಖೆಯ ನ್ಯಾಯಾಲಯಗಳಲ್ಲಿ ನಿಯಮಬಾಹಿರವಾದ ದಾವೆಗಳನ್ನು ದಾಖಲು ಮಾಡಿದಾಗ ಸಂಘದ ಹಿತದೃಷ್ಟಿಯಿಂದ ಮತ್ತು ಸಾಮಾಜಿಕ ನ್ಯಾಯವನ್ನು ಪರಿಗಣಿಸದೆ ಇಲಾಖಾ ಅಧಿಕಾರಿಗಳು ಅನಗತ್ಯವಾಗಿ ಅಂತಹ ದಾವೆಗಳನ್ನು ಪುರಸ್ಕರಿಸಿ ತಡೆಯಾಜ್ಞೆ ನೀಡಿರುವಂತಹ ಸಂದರ್ಭಗಳಲ್ಲಿ ಸಂಘದ ಹಿತದೃಷ್ಟಿಯಿಂದ ಸದರಿ ದಾವೆಗಳನ್ನು ನಡೆಸಲು ಅಡಳಿತ ಮಂಡಳಿಯು ಸದಸ್ಯರು ಅಷ್ಟೊಂದು ಜ್ಞಾನ, ಕಾಯಿದೆಯ ತಿಳುವಳಿಕೆ ಹೊಂದಿಲ್ಲದ ಹಿನ್ನೆಲೆಯಲ್ಲಿ ವಕೀಲರುಗಳ ನೆರವನ್ನು ಪಡೆಯಲು ಸಂಘವು ಖರ್ಚು ಮಾಡುವುದು ಅನಿವಾರ್ಯ ಪ್ರಸಂಗ ಉಂಟಾಗಿದೆ. ಅಂತಹ ದಾವೆಗಳು ನಿರ್ಣಯವಾದ ನಂತರ ಮೇಲ್ಕಂಡ ವೆಚ್ಚವನ್ನು ಸಂಘದ ಆಡಳಿತ ಮಂಡಳಿಯು ಸಂಘದ ಹಿತದೃಷ್ಟಿಯಿಂದ ಮಾಡಿರುವ ನಿರ್ಣಯ ಕೈಗೊಂಡಿದೆ. ಆದ್ದರಿಂದ ಈ ಅರೋಪವನ್ನು ಕೈಬಿಡಲು ಕೋರಿದೆ.

**ಈ ಕಾರ್ಯಾಲಯದ ಮುಖ್ಯ ಅಧಿಕಾರಿಗಳ ಅಭಿಪ್ರಾಯ:–**

ಆಡಳಿತ ಮಂಡಳಿಯು ಈ ಆರೋಪಕ್ಕೆ ಸಂಬಂಧಪಟ್ಟಂತೆ ವಿವರಣೆಯನ್ನು ಸಲ್ಲಿಸುವಾಗೇ ಶ್ರೀ ಎಂ.ರಾಜು, ಕಾರ್ಯದರ್ಶಿಗಳು ಇವರ ವಿರುದ್ಧ ಯಾವುದೇ ಪ್ರಕರಣ ದಾಖಲಾಗಿರುವುದಿಲ್ಲ. ಮತ್ತು ಯಾವುದೇ ನ್ಯಾಯಾಲಯದ ಶುಲ್ಕು ಖರ್ಚು ಹಾಕಿರುವುದಿಲ್ಲ ಎನ್ನುವುದನ್ನು ಒಪ್ಪಿಕೊಳ್ಳಲಾಗಿದೆ.

ಆದರೆ ಮುಂದುವರೆದು ವಿವರಿಸುತ್ತಾ ನ್ಯಾಯಾಲಯಗಳು ನಿಯಮಬಾಹಿರವಾದ ದಾವೆಗಳನ್ನು ದಾಖಲು ಮಾಡಿದಾಗ ಇಲಾಖಾ ಮಧ್ಯಸ್ಥಧಾರರು ಅನಗತ್ಯವಾಗಿ ದಾವೆಗಳನ್ನು ಪುರಸ್ಕರಿಸಿ ತಡೆಯಾಜ್ಞೆ ನೀಡುತ್ತಾ ಬಂದಿರುತ್ತಾರೆ ಎನ್ನುವ ವಿವರಣೆಯು ನ್ಯಾಯಾಲಯದ ಕಾರ್ಯವ್ಯಾಪ್ತಿಯಲ್ಲಿ ಹಸ್ತಕ್ಷೇಪ ಮಾಡಿದಂತಾಗಿರುತ್ತದೆ. ಆದ್ದರಿಂದ ಈ ಸಮಜಾಯಿಷಿಯನ್ನು ಗಂಭೀರವಾಗಿ ಪರಿಗಣಿಸಲಾಗಿದೆ.

**ಆರೋಪ – 8 :–**

ಸಂಘವು ತನ್ನ ಕಾರ್ಯಕ್ಷೇತ್ರದಲ್ಲಿ ಬರುವ ಹಾಲು ಉತ್ಪಾದಕರು ಮತ್ತು ಆ ಹಾಲನ್ನು ರೂಪಾಂತರಗೊಳಿಸಿ ಇಲ್ಲವೆ ಶುದ್ದೀಕರಣಗೊಳಿಸಿ ಗ್ರಾಹಕರಿಗೆ ಪೂರೈಸುವ ಒಕ್ಕೂಟ ಇವರುಗಳ ಮಧ್ಯವರ್ತಿಯಾಗಿ ಕಾರ್ಯನಿರ್ವಹಿಸಿ ಉತ್ಪಾದಕರ ಹಾಗೂ ಗ್ರಾಹಕರ ಹಿತರಕ್ಷಣೆ ಮಾಡುವ

